

ಶ್ರೀ ಶ್ರೀಗಳವರ ಗುರುವಂದನ-89ನೇ ಜನ್ಮ ದಿನೋತ್ಸವವನ್ನು 7-7-96 ಭಾನುವಾರ ಸರ್ವೋಚ್ಚನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಶ್ರೀ ಇ. ಎಸ್. ವೆಂಕಟರಾಮಯ್ಯ ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.




ವೇದಿಕೆಯ ಮೇಲೆ ಶ್ರೀ ಶ್ರೀಗಳಿಂದ ಎಡಕ್ಕೆ ಅಧ್ಯಕ್ಷತೆ ವಹಿಸಿದ್ದ ಬೆಂ. ಜಿಲ್ಲೆ, ಕನಕಪುರ ತಾ|| ಮರಳೇಗವಿ ಮಠಾಧ್ಯಕ್ಷರಾದ ಚರಮೂರ್ತಿ ಶ್ರೀ ಶ್ರೀ ಕಾಲಾಗ್ನಿ ರುದ್ರಮುನಿ ಸ್ವಾಮಿಗಳು, ಮುಖ್ಯ ಅತಿಥಿಗಳಾಗಿ ಕರ್ನಾಟಕ ಉಚ್ಚನ್ಯಾಯಾಲಯದ ನ್ಯಾಯಾಧೀಶರಾದ ಶ್ರೀ ಎ. ಜೆ. ಸದಾಶಿವ ಅವರನ್ನು ಕಾಣಬಹುದು

# ಸಿದ್ಧಗಂಗಾ

ಸಂಪುಟ-32 ಸಂಚಿಕೆ-7 ಜುಲೈ-1996.

## ಶ್ರೀ ಸಿದ್ಧಗಂಗಾಗುರುಕರುಣ ತ್ರಿವಿಧಿ

ಹೆತ್ತಮ್ಮನ ಪುಣ್ಯವೆರೂಪು ತಾ ತಳೆದಂತೆ
ಚಿತ್ತಕ್ಕೆ ತೋರುತಿಹೆ ನನ್ನ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ತಂದೆ ಕಲಿಸಿದ ವಿದ್ಯೆ ತಾಯಿ ನೀಡಿದ ಬುದ್ಧಿ
ಲೋಕ ಕಲ್ಯಾಣವ ಗೈದಿಹುದು । ನನ್ನ ಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

'ಓನಾಮ' ಕಲಿಸಿದ ಗುರುಪುಣ್ಯಯಾರೆಂಬೆ ?
ಶ್ರೀಯಾಗಿ ಶಿವವಾಗಿ ಬೆಳಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥



-ಹೆಚ್. ವಿ. ವೀರಭದ್ರಯ್ಯ

| ಲೇಖನ | ಲೇಖಕರು | ಪುಟ |
|---|---|---|
| * ಶ್ರೀವಾಣಿ | — | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ | — | 7 |
| * ಸಂಪಾದಕೀಯ | — | 9 |
| * ಶೀಲವ್ರತಾಚಾರಗಳ ಪ್ರತೀಕ ಶಿವಶರಣೆ ಅಕ್ಕಮ್ಮ | —ಡಾ॥ ಸಂಗಮೇಶ ಸವದತ್ತಿಮಠ | 11 |
| * ಮನುಸ್ಮೃತಿ-ವರವೋ ಶಾಪವೋ ? ಒಂದು ಚಿಕಿತ್ಸಕ ನೋಟ | — ಮಹಾಂತೇಶ ಮಲ್ಲನಗೌಡ | 16 |
| * ವ ಚ ನ ದೀ ಪ್ತಿ | — ವಿದ್ವಾನ್ ಎಸ್ ಷಡಕ್ಷರಿ | 19 |
| * ಮುಕ್ತಾಯಕ್ಕ-ಸತ್ಯಕ್ಕ | — ಪ್ರೊ ಎಸ್. ಎಸ್. ಭೂಸರೆಡ್ಡಿ | 21 |
| * ಒಂದು ಹಳ್ಳಿಯ ಕತೆ | — ಬಿ. ಸುಬ್ರಾಯ ಅಡಿಗ | 23 |
| * ಆರೋಗ್ಯ ಆಶಿಸುವ ಜೀವ | — ಭಾವಜ್ಞ ಜಮುಖಂಡಿ | 26 |
| * ನಿಜವಾದ ಮಾನವತೆ | — ಪ॥ ರಾಮಕೃಷ್ಣ ಶಾಸ್ತ್ರಿ | 27 |
| * ಕಣ್ಣುಗಳ ಸಂರಕ್ಷಣೆ | — ಡಾ॥ ಎಲ್. ಆರ್. ಹೆಗಡೆ | 29 |
| * ಗೋಮುಖ ವ್ಯಾಘ್ರ | — ಜೆ. ಶಾರದ ರಾಜಶೇಖರ್ | 38 |
| * ಕ್ಷೇತ್ರವಾರ್ತೆ | — ಹೆಚ್. ಬಿ. ಗಂಗಾಧರಯ್ಯ | 40 |


## ಶ್ರೀ ವಾಣಿ



**ಗುಣಮಟ್ಟ :**

ಮೊನ್ನೆ ಒಂದು ಅಪ್ಲಿಕೇಷನ್ ತಂದುಕೊಟ್ಟರು. ಕೊಟ್ಟಾತ ಒಬ್ಬ ನಿವೃತ್ತ ಶಿಕ್ಷಕ. ಮೂವತ್ತು ವರ್ಷಗಳ ಸೇವೆ ಸಲ್ಲಿಸಿ ವಿಶ್ರಾಂತ ಜೀವನಕ್ಕೆ ಕಾಲಿಡುತ್ತಿರುವ ವ್ಯಕ್ತಿ. ಮುಖ್ಯೋಪಾಧ್ಯಾಯನಾಗಿ ಪ್ರೌಢಶಾಲೆಯ ಆಡಳಿತಾಂಗದಲ್ಲಿ ಕೆಲಸ ನಿರ್ವಹಿಸಿದ ಶಿಕ್ಷಕ. ಅವನು ಕೊಟ್ಟ ಅರ್ಜಿಯ ವಿಷಯವನ್ನಿಲ್ಲಿ ಪ್ರಸ್ತಾಪಿಸುತ್ತಿಲ್ಲ. ಆ ಅರ್ಜಿಯ ಭಾಷಾದೋಷಗಳನ್ನು ಕುರಿತು ಹೇಳಬೇಕಾಗಿದೆ. "ನನ್ನ ಹಣ್ಣನಿಗೆ" ಎಂದು ಪದ ಬಳಸಿದ್ದು ಕಾಣಬಂದಿತು. ಇನ್ನೊಂದು ಇಂಗ್ಲಿಷ್ ಎಂ.ಎ ಮಾಡುತ್ತಿರುವ ಅಭ್ಯರ್ಥಿಯೊಬ್ಬ ಅಪ್ಲಿಕೇಷನ್ ಕೊಟ್ಟುಹೋದ. ಅದರ ಮೇಲೆ ಕಣ್ಣಾಡಿಸಿದಾಗ ಇದು ಯಾವ ಇಂಗ್ಲಿಷ್ ಎಂಬ ಭಾವನೆ ಬಂದಿತು. "I am here by informing" ಎಂದು ಪ್ರಾರಂಭಿಸಿ ಅನಂತರ "Requesting" ಎಂದು ಸೇರಿಸಿ ವಾಕ್ಯ ಪ್ರಾರಂಭ ಮಾಡಿದ್ದು ಕಾಣಬಂದಿತು. ಮತ್ತೊಂದು ಸಮಯದಲ್ಲಿ ವಿದ್ಯಾರ್ಥಿಗಳ ಅಟೆಂಡೆನ್ಸ್ ರಿಜಿಸ್ಟರ್ ನೋಡುವ ಸಂದರ್ಭದಲ್ಲಿ ವಿದ್ಯಾರ್ಥಿ "ಷಿವರುದ್ರಯ್ಯ," 'ಮುಖ್ಯೊಪಧ್ಯಾಯ' ಎನ್ನುವ ಕಾಗುಣಿತಗಳ ದೋಷಗಳನ್ನು ಕಾಣುವಂತಾಯಿತು. ಇವು ಶಿಕ್ಷಣ ಕ್ಷೇತ್ರದಲ್ಲಿ ಕಾಣಬರುತ್ತಿರುವುದಾದರೆ ಅನ್ಯಕ್ಷೇತ್ರಗಳ ಹಣೆಬರಹವೂ ಇದೇ ಆಗಿದೆ. ಸಂಸ್ಕೃತ ಪ್ರೌಢವಾದ ಜ್ಞಾನನಿಷ್ಠವಾದ ಭೌದ್ಧಿಕ ಭಾಷೆ. ಅಲ್ಲಿನ ಶ್ಲೋಕಗಳ ಅಧ್ಯಯನ ನಿರ್ದಿಷ್ಟವಾಗಿರುತ್ತದೆ. ತಪ್ಪಿಲ್ಲದ ಉಚ್ಚಾರ ಅತಿ ಮುಖ್ಯ. ಪೂಜಾಸಂದರ್ಭದಲ್ಲಿ ಕೆಲಮಂತ್ರಗಳನ್ನು ಪಠಿಸುವ ಪುಣ್ಯಾತ್ಮರು ಅಪಶಬ್ದವನ್ನೇ

ಎತ್ತಿದ ಕಂಠದಲ್ಲಿ ಉಗ್ಗಡಿಸುವುದನ್ನು ಗಮನಿಸಬಹುದು. ವಸ್ತುಗಳ ಉತ್ಪಾದನೆಯಲ್ಲಿ ಮಾಡುವ ಕೆಲಸದಲ್ಲಿ, ಕಲಿಯುವ ಹಂತದ ಗುಣಕ್ಕೆ ಪ್ರಾಮುಖ್ಯತೆ ಇಲ್ಲವಾಗಿದೆ. ಪರೀಕ್ಷೆಗಳಲ್ಲಿ ಫಲಿತಾಂಶ ಇಳಿಮುಖವಾಗಿದೆ. ಏರುಮುಖವಾಗಿದೆ ಎಂದರೆ ಅಪಮಾರ್ಗದಲ್ಲಿ ನಡೆದಿರಬೇಕು ಎಂಬುದು ಬಹಿರಂಗ ಸತ್ಯವಾಗಿದೆ. ಚುನಾವಣೆಗಳಲ್ಲಿ ಪ್ರಚಂಡ ಬಹುಮತಗಳಿಸಲಾಯಿತು ಎನ್ನುವಾಗ ನಡೆದಿರುವ ಭ್ರಷ್ಟಾಚಾರವನ್ನು ಮರೆಯುವಂತಿಲ್ಲ. ಕೃಷಿ ಕೃತ್ಯ ಕಾಯಕವೊಂದೆ ಭ್ರಷ್ಟ ಮುಕ್ತವಾದ ಪವಿತ್ರ ದುಡಿಮೆಯೆಂಬ ಸದ್ಭಾವನೆಯಿತ್ತು. ಅಲ್ಲಿಯುಪ್ರಾಮಾಣಿಕವಾದ ದುಡಿಮೆ ಕಾಣಬರುತ್ತಿಲ್ಲ. ಪ್ರಕೃತಿ ಸೋಮಾರಿಗಳಿಗೆ, ಸೋಗಲಾಡಿತನಕ್ಕೆ ಒಲಿಯಲಾರಳು. ಗುಣಮಟ್ಟವನ್ನು ನಿರ್ಧಾರ ಮಾಡುವ ಸಂಸ್ಥೆಗಳೆ ಅಸ್ತಿತ್ವದಲ್ಲಿವೆ. ಆದರೆ ಅಲ್ಲಿಯೂ ನ್ಯೂನತೆಗಳಿವೆಯೆನ್ನಲಾಗುತ್ತದೆ. ನಮ್ಮ ಪೂಜ್ಯ ಗುರುಗಳು ಬಳಸುತ್ತಿದ್ದ ಕೆಲವು ವಸ್ತುಗಳು ನಮ್ಮ ಬಳಿ ಇನ್ನೂ ಇವೆ. ಸುಭದ್ರಸ್ಥಿತಿಯಲ್ಲಿವೆ. ನಮ್ಮಲ್ಲಿ ಅಂಬಲಗೆರೆ ನಂಜುಂಡಯ್ಯ ಎಂಬ ಅಧ್ಯಾಪಕರೊಬ್ಬರಿದ್ದರು. ಅವರು ನೆಲಮಂಗಲದಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ಸಂಸ್ಕೃತ ಬೋಧಿಸುವ ಅವಕಾಶ ಲಭ್ಯವಾಗಿತ್ತು. ಆದರೆ ಅವರಿಗೆ ಸಂಸ್ಕೃತ ಜ್ಞಾನ ಅಷ್ಟಾಗಿರಲಿಲ್ಲ. ಅವರು ಶ್ರೀಮಠಕ್ಕೆ ಶನಿವಾರ, ಭಾನುವಾರ ಬಂದು ಇಲ್ಲಿ ಶ್ರೀ ರುದ್ರಾರಾಧ್ಯ ಶರ್ಮ ಶ್ರೀ ಬಿ. ಗಂಗಪ್ಪ ಅವರಿಂದ ಪಾಠ ಹೇಳಿಸಿಕೊಂಡು ಸೋಮವಾರ ಶಾಲೆಗೆ ಹೋಗಿ ಬೋಧಿಸುತ್ತಿದ್ದರು. ಅವರೊಮ್ಮೆ ಶಾಲಾತನಿಖಾಧಿಕಾರಿಗಳಾದ ಶ್ರೀ ಗೋಪಾಲ್ ಎಂಬುವರ ಮುಂದೆ ಬೋಧಿಸಬೇಕಾಯಿತು. ಬೋಧನಾ ವಿಧಾನ ಗಮನಿಸಿದ ತನಿಖಾಧಿಕಾರಿಗಳು ನಂಜುಂಡಯ್ಯನವರಿಗೆ "ಬೋಧನಾಚಾರ್ಯ" ಎಂದು ಪ್ರಶಂಸಿ ಮಾತನಾಡಿದರು. ಗುಣಮಟ್ಟವನ್ನು ಕಾಪಾಡಿಕೊಳ್ಳುವುದರ ಹಿಂದೆ ಶ್ರದ್ಧೆ, ಪ್ರಾಮಾಣಿಕತೆ, ತಾನು ಪ್ರತಿನಿಧಿಸುತ್ತಿರುವ ಸಮಾಜ ಪ್ರಜ್ಞೆ ಇರಬೇಕಾಗುತ್ತದೆ. ಕೊನೆಯದಾಗಿ ಒಂದು ಮಾತು. ಯಾರು ತಪ್ಪು ತಿಳಿಯಬಾರದು. 'ಗುಣಮಟ್ಟ' ಎಲ್ಲರಿಗೂ ಅನ್ವಯವಾಗುವ ಮಾತು. ಸ್ವಾಮಿಗಳು ಮಠಾಧೀಶರಿಗೂ ಸಹ.

## ಶ್ರೀ ಸಿದ್ಧಲಿಂಗೇಶ್ವರ ವಚನ



ಇಂದ್ರಿಯಂಗಳಿಗೊಂದು ಮಾತು ಕಲಿತು
ಬಹಳ ಬಲ್ಲೆವು ಬ್ರಹ್ಮಜ್ಞಾನಿಗಳೆಂದು ನುಡಿದು ಕೊಂಡು
ನುಡಿಯ ಬಲ್ಲಿರಲ್ಲದೆ,
ಸಾವಸರಿದಿಹೆನೆಂದರೆ ದೇವತಾದಿಗಳಿಗಳವಲ್ಲ ಕಾಣಿರಣ್ಣಾ
ದೇವರ ಮೂರ್ತಿಯ ಭಾವದಲ್ಲಿ ಕಂಡಲ್ಲದೆ
ಭವದುಃಖ ಹಿಂಗದು ನೋಡಾ
ಭವದುಃಖ ಹಿಂಗಿಸದೆ ಶಿವಾನುಭವವೇಕೆ ಹೇಳಿರೋ ?
ಹುಸಿಯನೆ ಹೊಸೆದು ಹುಸಿಯನೆ ಕೊಚ್ಚಿ
ಪಶುಪತಿಯ ಅನುಭವಿಗಳೆಂದು
ಪ್ರಳಯಕ್ಕೊಳಗಾಗಿ ಹೋದರು ನೋಡಾ
ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ.

ತಾವು ಬ್ರಹ್ಮಜ್ಞಾನಿಗಳು, ಎಲ್ಲವನ್ನು ತಿಳಿದವರು ಎಂದು ಮಾತನಾಡುವುದು ಬಹಳ ಸುಲಭ. ಅಂಥವರೆಂದೂ ತಮ್ಮ ನಿಜವನ್ನು ಅರಿಯರು. ತಮ್ಮ ನಿಜವನ್ನರಿತವರನ್ನು ಸಂಸಾರದುಃಖವು ಎಂದಿಗೂ ಮುಟ್ಟದು ಯಾರು ಸಂಸಾರದುಃಖವನ್ನು ಶಮ್ಮೊಳಗಿಟ್ಟುಕೊಂಡು ತಾವು ಶಿವಾನುಭವಿಗಳು ಎಂದು ಹೇಳುತ್ತಿರುವರೋ ಅಂಥವರಿಗೆ ವಿನಾಶವೇ ಕಟ್ಟಿಟ್ಟದ್ದು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ ಶ್ರೀ. ತೋ. ಸಿ.ಕೈಂ. ಸೇ. ಸಂ. ಎಡೆಯೂರು–ಗದಗ)

## ಸಿದ್ಧಗಂಗಾ ಮಾಸ ಪತ್ರಿಕೆ

**ಸಂಪಾದಕ ಮಂಡಳಿ**

ಚನ್ನಪ್ಪ ಎರೆಸೀಮೆ
ಪ್ರಧಾನ ಸಂಪಾದಕರು.

ಹೆಚ್. ವಿ. ವೀರಭದ್ರಯ್ಯ
ಸಂಪಾದಕರು

ಎಂ. ರೇಣುಕಾರಾಧ್ಯ
ಸಹ ಸಂಪಾದಕರು

ಹೆಚ್. ಬಿ. ಗಂಗಾಧರಯ್ಯ
ಪ್ರಕಾಶಕರು

* * *

**ಸಲಹಾ ಸಮಿತಿ**

ಡಾ|| ಎಂ. ಎನ್. ಚನ್ನಬಸಪ್ಪ
ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ
ಮುದ್ರಕರು

* * *

ಶ್ರೀಸಿದ್ಧಗಂಗಾಕ್ಷೇತ್ರ
ಪ್ರಕಟಣೆಯ ಸ್ಥಳ

**ಲೇಖಕರಲ್ಲಿ ಮನವಿ**

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 32ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

**ಕೆಲವು ಪ್ರಸಂಗಗಳು.**

ಆನಂದ ಆರು ವರ್ಷದ ಮಗು. ಅಣ್ಣ ಗೋವಿಂದನ ಜತೆಯಲ್ಲಿ ಮಠದ ಮುಂದೆ ಮೆಟ್ಟಿಲ ಮೇಲೆ ರಾತ್ರಿ 9 ಗಂಟೆ ಸಮಯದಲ್ಲಿ ಓದುತ್ತ ಕುಳಿತಿದ್ದ. ಒಂದು ನಿಕ್ಕರು, ಒಂದು ಬನಿಯನ್ ಅಷ್ಟೇ ಮೇಲಿದ್ದ ಬಟ್ಟೆಗಳು. ಮುದ್ದು ಮುದ್ದಾಗಿ ಮಾತಾಡುತ್ತಾನೆ. ಯಾವೂರು ಮಗು ಎಂಬ ಪ್ರಶ್ನೆಗೆ ಕೊಡಿಗೇನಹಳ್ಳಿ ಎಂದುತ್ತರಿಸಿದ. ಏನು ಓದುತ್ತಿದ್ದೀಯೆ ಎಂದಾಗ ಒಂದನೇ ಕ್ಲಾಸೆಂದು ಹೇಳಿದ. ಅಣ್ಣ ಗೋವಿಂದನನ್ನು ಪ್ರಶ್ನಿಸಿದಾಗ 5ನೇ ಕ್ಲಾಸಿನಲ್ಲಿ ಓದುತ್ತಿದ್ದೇನೆಂದು ತಿಳಿಸಿದ. ಅಣ್ಣ-ತಮ್ಮ ಇಬ್ಬರು ಮೆಟ್ಟಿಲನ ಆಶ್ರಯ ಪಡೆದಿದ್ದರು. ನಿರಾತಂಕವಾಗಿ ಕಂಬಕ್ಕೊರಗಿ ಕುಳಿತು ಓದಿನಲ್ಲಿ ತಲ್ಲೀನರಾಗಿದ್ದರು. ತಂದೆ-ತಾಯಿಗಳ ನೆನಪಾಗುವುದಿಲ್ಲವೆ ಎಂದಾಗ ಸ್ವಾಮಿಗಳಿರುವಾಗ ಅದೆಲ್ಲ ನಮಗೆ ಮರೆತೇ ಹೋಗಿದೆ ಎಂದರು. ಮುಗ್ಧ ಮಾತುಗಳ ಹಿಂದೆ ಅಡಗಿದ್ದ ಸದ್ಭಾವನೆಯನ್ನು ಕಂಡು ಸಂತೋಷವಾಯಿತು.

ಊಟಮಾಡಿ ನಲ್ಲಿಯ ಬಳಿ ತಟ್ಟೆ ತೊಳೆಯುತ್ತಿದ್ದ ಕುಂಟು ಹುಡುಗನೊಬ್ಬನನ್ನು ಕುತೂಹಲಕ್ಕಾಗಿ ವಿಚಾರಿಸಿದಾಗ ರಾಯಚೂರು ಜಿಲ್ಲೆಯವನೆಂದೂ, ಪ್ರೌಢಶಾಲೆಯ 9ನೇ ತರಗತಿಯಲ್ಲಿದ್ದಾನೆಂದು ತಿಳಿಯಿತು. ಇಲ್ಲಿನ ಊಟ ನಿನಗೆ ಸರಿಬರುತ್ತದೆಯೇ ಎಂದಾಗ ಕಣ್ಣೀರು ತುಂಬಿದ ಆ ವಿದ್ಯಾರ್ಥಿ ಹೇಳಿದ ಮಾತುಗಳು "ಸರ್ ನಮ್ಮೂರಿನಲ್ಲಿ ನಮ್ಮ ಮನೆಯಲ್ಲಿ ತಿನ್ನುವ ರೊಟ್ಟಿಗೇ ಗತಿಯಿಲ್ಲದಿರುವಾಗ, ಬುದ್ಧಿಯವರು ಹಾಕುತ್ತಿರುವ ಊಟ ನನ್ನ ಪಾಲಿಗೆ ದೇವರ ಪ್ರಸಾದ, ಹಬ್ಬದೂಟ" ಎಂಬ ಕೃತಜ್ಞತೆಯ ಮಾತುಗಳನ್ನಾಡಿದ.

ನಂದಿಬಸವಯ್ಯನವರು ನಿವೃತ್ತ ಸಂಸ್ಕೃತ ಶಿಕ್ಷಕರು. ಸಾತ್ವಿಕರು, ತಮ್ಮ ಮೊಮ್ಮಗಳು ಪಿ.ಯು.ಸಿ.ಯಲ್ಲಿ ರ್‍ಯಾಂಕುಗಳಿಸಿದ್ದನ್ನು ತಿಳಿಸಿಬರಲು ಸ್ವಾಮಿಗಳ ಬಳಿಗೆ ಹೋಗಿದ್ದರು. ಮುಂದಕ್ಕೆ ಓದಿಸಲು ಆರ್ಥಿಕ ಚೈತನ್ಯ ಸಾಲದು ಟಿ.ಸಿ.ಹೆಚ್.ಗೆ ಒಂದು ಸೀಟುಕೊಡಿ ಎಂದು ಕೇಳಿದರು. ಪ್ರತಿಭೆಯಿರುವ ವಿದ್ಯಾರ್ಥಿನಿಯನ್ನು ಪದವಿ ತರಗತಿಗೆ ಸೇರಿಸು. ದೈವಸಹಾಯ ಒದಗಿಬರುತ್ತದೆ'–ಎಂದರು ಸ್ವಾಮಿಗಳೆಂದು ಶ್ರೀಯುತರು ತಿಳಿಸಿದರು.

ಡಿ. ಚಂದ್ರಶೇಖರಯ್ಯನವರು ಶ್ರೀ ಮಠದ ಭಕ್ತರು. ಕಳೆದ ವರ್ಷ ಲಿಂಗೈಕ್ಯರಾದರು. ಅವರ ಪ್ರಥಮ ವಾರ್ಷಿಕ ಪುಣ್ಯಾರಾಧನೆ 7-7-96ರಂದು ಪೂಜ್ಯಶ್ರೀಗಳವರ ಶಿವಪೂಜಾ ಕಾರ್ಯಕ್ರಮದೊಂದಿಗೆ ನಿರ್ಧಾರವಾಯಿತು. ಅದರೆ ಅಂದೇ ಪೂಜ್ಯಪಾದರ "ಗುರುವಂದನ" ಕಾರ್ಯಕ್ರಮ ಶ್ರೀ ಮಠದಲ್ಲಿ, ಅದೂ ಬೃಹತ್ ಪ್ರಮಾಣದಲ್ಲಿ. ಶ್ರೀಗಳವರೇ ಚಂದ್ರಪ್ಪನವರ ಬಂಧುಗಳಿಗೆ ಹೇಳಿಕಳಿಸಿ, 6-7-96 ರಂದೇ ಆರಾಧನೆಯನ್ನಿಟ್ಟು ಕೊಳ್ಳುವ ಸೂಚನೆ ಕೊಟ್ಟರು.

29-6-96ರಂದು ಶ್ರೀ ಮಠದಲ್ಲಿ ಶೂನ್ಯ ಸಂಪಾದನೆಯನ್ನು ಕುರಿತು ಹುಣ್ಣಿಮೆ ಉಪನ್ಯಾಸ. ಪ್ರವಚನಕಾರರು ಪ್ರೊ॥ ವಿ.ವಿ. ಸಂಗಮದ ಪ್ರವಚನ ರಾತ್ರಿ 7-15ಕ್ಕೆ ಪ್ರಾರಂಭವಾಗಿ 9ರ ವರೆಗೆ ನಡೆದಿತ್ತು. ಪೂಜ್ಯ ಶ್ರೀಗಳು ಕಾರ್ಯಾಲಯದಿಂದ ಹಳೇಮಠಕ್ಕೆ ಬಂದವರು ಪ್ರವಚನಕ್ಕೆ ತೊಂದರೆಯಾಗ ಬಾರದೆಂದು ಹೊರಗೆ ಕುಳಿತು ಕೇಳಿದರು.

ಎಸ್.ಐ.ಟಿ. ಪ್ರಿನ್ಸಿಪಾಲರಾದ ಡಾ॥ ಎಂ.ಎಸ್. ಚನ್ನಬಸಪ್ಪನವರು ಶ್ರೀಯುತರು ಸಂಸ್ಥೆಗೆ ಬಂದಮೇಲೆ ಸ್ವಾಮಿಗಳ ಕೆಲಸ ಅಷ್ಟು ಕಡಿಮೆಯಾಯಿತು. 'ಚೆನ್ನಬಸಪ್ಪ ಇಂದೂ ಕ್ಲಾಸಿಗೆ ಹೋಗುವ ಮೊದಲು ಪ್ರಿಫೇರ್ ಆಗದೆ ಹೋಗುವುದಿಲ್ಲ, ನಿನಗೆಗೊತ್ತಾ ಎನ್ನುತ್ತಿರುತ್ತಾರೆ.

ಪರಮ ಪೂಜ್ಯ ಶ್ರೀ ಶ್ರೀಗಳವರು ಕಾಣಬರುವುದು-ಹೀಗೆ.



# ಶೀಲವ್ರತಾಚಾರಗಳ ಪ್ರತೀಕ ಶಿವಶರಣೆ ಅಕ್ಕಮ್ಮ


● ಡಾ॥ ಸಂಗಮೇಶ ಸವದತ್ತಿಮಠ, ರೀಡರ್, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗ ವಿಶ್ವವಿದ್ಯಾಲಯ


12 ನೆಯ ಶತಮಾನದಲ್ಲಿ ವೀರಶೈವ ಸಾಮಾಜಿಕ ಧಾರ್ಮಿಕ, ಸಾಹಿತ್ಯಿಕ ಕ್ರಾಂತಿಯ ಮೂಲ ಸ್ರೋತವಾದ ಮಹಾನುಭಾವಿ ಬಸವಣ್ಣನ ವಿಚಾರಧಾರೆಯನ್ನು ಒಪ್ಪುವುದರ ಮೂಲಕ ಹಾಗೂ ಅದಕ್ಕೆ ತಮ್ಮದೇ ವಿಶಿಷ್ಟ ಅನುಭವದ ಲೇಪದೊಂದಿಗೆ ಅದಕ್ಕೆ ಹೊಸಬೆಳಕು ಬೀರುವ ಕಾರ್ಯವನ್ನು ತತ್ಕಾಲೀನ ಶರಣ ಸಂದೋಹ ಅಮೋಘವಾಗಿ ಕೈಗೊಂಡಿತು. ವೀರಶೈವ ಅನುಭವ ಮಂಟಪಕ್ಕೆ ಬಸವ, ಚೆನ್ನ ಬಸವ, ಅಲ್ಲಮಪ್ರಭು, ಅಕ್ಕಮಹಾದೇವಿ ಮುಂತಾದ ಪ್ರಮುಖ ವಚನಕಾರರು ದ್ವಾರಗಳಾದರೆ ಇನ್ನಿತರ ವಚನಕಾರರು ಗವಾಕ್ಷಗಳಾದರು. ಸ್ವಾತಂತ್ರ್ಯವಿಲ್ಲದೆ ಮೂಲೆಗುಂಪಾಗಿದ್ದ ಹೆಣ್ಣುಮಕ್ಕಳಿಗೆ ವೀರಶೈವವು ನೀಡಿದ ಸ್ವಾತಂತ್ರ್ಯದಿಂದಾಗಿ ಅವರ ಪ್ರತಿಭಾ ಮೂಸೆಯಲ್ಲೂ ಅನರ್ಘ್ಯ ವಿಚಾರರತ್ನಗಳು ಸುರಿದವು. ತಮ್ಮ ವಿಚಾರಗಳನ್ನು ಸ್ವಚ್ಛಂದವಾಗಿ ನಿರ್ಭಿಡೆಯಿಂದ ಅಭಿವ್ಯಕ್ತಿಸುವ ಸದವಕಾಶ ಲಭಿಸಿದುದರಿಂದ ಆಧ್ಯಾತ್ಮದಂತಹ ಗಂಭೀರ ವಿಷಯದಲ್ಲೂ ಅವರು ವ್ಯಕ್ತಪಡಿಸುವ ವೈಚಾರಿಕ ನಿಲವು ಅನಾದೃಶ್ಯವಾಗಿ ಹೊಮ್ಮಿತು. ಪ್ರಾಯಶಃ ಜಗತ್ತಿನಲ್ಲಿ ವೇದಕಾಲಿನ ಬೆರಳೆಣಿಕೆಯಷ್ಟು ಸ್ತ್ರೀಯರನ್ನು ಹೊರತುಪಡಿಸಿ ಪ್ರಪ್ರಥಮವಾಗಿ ದೊಡ್ಡಪ್ರಮಾಣದಲ್ಲಿ ಸ್ತ್ರೀಯರು ತಲೆಯೆತ್ತಿನಿಂತು ಪುರುಷರ ಸರಿಸಮನಾಗಿ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಹಾಗೂ ವೈಚಾರಿಕ ಕ್ಷೇತ್ರಗಳಲ್ಲಿ ಮುನ್ನಡೆದಿರುವುದು ಐತಿಹಾಸಿಕ ಸತ್ಯವಾಗಿದೆ.

ವೀರಶೈವ ಶರಣೆಯರು ಅಸಂಖ್ಯಾತರಾಗಿದ್ದರು. ಅಸಂಖ್ಯಾತ ವಚನಗಳನ್ನು ರಚಿಸಿದರು. ಆದರೆ ಅವರ ಬಹಳಷ್ಟು ವಚನಗಳು ಕಲ್ಯಾಣದ ಕ್ರಾಂತಿಯ ಜ್ವಾಲೆಗೆ ಬಲಿಯಾಗಿರಬೇಕು. ಅಂತೂ ಅಳಿದುಳಿದ ವಚನಕಾರ್ತಿಯರ ಸಂಖ್ಯೆಯೇ ಐವತ್ತಕ್ಕೆ ಸಮೀಪ ಬರುತ್ತದೆ. ಎಲ್ಲ ಶರಣೆಯರ ವಚನಗಳು ಲಭ್ಯವಿಲ್ಲ. ಲಭ್ಯವಿದ್ದವುಗಳೆಲ್ಲ ಪ್ರಕಟವಾಗಿಲ್ಲ. ಪ್ರಕಟವಾದವುಗಳೆಲ್ಲ ಅಧ್ಯಯನಕ್ಕೆ ಪಕ್ಕಾಗಿಲ್ಲ. ಒಬ್ಬೊಬ್ಬ ವಚನಕಾರ್ತಿಯ ವಚನಗಳೂ ಆಳವಾದ ಅಧ್ಯಯನಕ್ಕೆ ಒಳಪಡುವುದವಶ್ಯವಾಗಿದೆ. ಇಪ್ಪತ್ತನೆಯ ಶತಮಾನದ ಆಧುನಿಕ ಮಹಿಳೆ ಇಂದು ಸ್ವತಂತ್ರವಾಗಿ ಬರೆಯಬಲ್ಲವಳಾಗಿದ್ದಾಳೆ. ಆದರೆ ಕನ್ನಡದಲ್ಲಿ ಆಧ್ಯಾತ್ಮದಂತಹ ಗಂಭೀರ ವಿಷಯದಲ್ಲಿ ಉನ್ನತ ವೈಚಾರಿಕ ನಿಲವಿನಲ್ಲಿ ಬರೆಯುವ ಮಹಿಳೆಯರು ತೀರ ಕಡಿಮೆ ಸಂಖ್ಯೆಯಲ್ಲಿದ್ದಾರೆ. 12 ನೆಯ ಶತಮಾನದಲ್ಲಿ ಕನ್ನಡ ಶಿವಶರಣೆಯರು ಎಷ್ಟು ದೊಡ್ಡ ಸಂಖ್ಯೆಯಲ್ಲಿದ್ದರು

ಹಾಗೂ ಎಷ್ಟು ಉನ್ನತಮಟ್ಟದ ವಚನಸಾಹಿತ್ಯ ನೀಡಿರುವರು ಎಂಬುದನ್ನು ಮನ ಗಂಡರೆ ಇಂದಿನ ಸ್ಥಿತಿ ಕಂಡು ನಿರಾಶೆಯಾಗುತ್ತದೆ.

ಲೌಕಿಕ ಗಂಡನೊಬ್ಬನನ್ನು ಲೋಕ-ರೂಢಿಯಂತೆ ಕಟ್ಟಿಕೊಂಡರೂ ಆಧ್ಯಾತ್ಮಿಕ ಗಂಡನೆಂದು ಶಿವನನ್ನು ನಂಬಿ ತಮ್ಮ ಆರಾಧ್ಯನಾದವನ ಅಂಕಿತವನ್ನಿಟ್ಟುಕೊಂಡು ಅನುಭಾವಗೀತಗಳಾದ ವಚನಗಳನ್ನು ಶಿವಶರಣೆಯರು ರಚಿಸಿದರು. ಸಂಸಾರದಲ್ಲಿದ್ದು ಕೊಂಡೆ ತಾವೂ ಒಂದು ಸಣ್ಣ ಕಾಯಕದಲ್ಲಿ ತೊಡಗಿ, ಕೆಲವು ಸಲ ತಮ್ಮ ಗಂಡಂದಿರು ತಪ್ಪಿದ್ದಲ್ಲಿ ಕಾಂತಾಸಮ್ಮಿತವಾಗಿ ತಿದ್ದುತ್ತ ಸತಿಪತಿಗಳೊಂದಾದ ಭಕ್ತಿಯನ್ನು ಶಿವನಿಗೆ ಹಿತವಪ್ಪುವಂತೆ ನಡೆಸಿ ಜೀವನ ಸಾರ್ಥಕ ಮಾಡಿಕೊಂಡವರು ಹಲವು ಶಿವಶರಣೆಯ-ರಾದರೆ ಅಕ್ಕಮಹಾದೇವಿಯಂತೆ ವಿರಾಗಿಗಳಾಗಿ ಲೌಕಿಕ ಸಂಸಾರದ ಜಂಜಾಟವನ್ನು ಕಳಚಿಕೊಂಡು ಆಧ್ಯಾತ್ಮದ ಮಾರ್ಗದಲ್ಲಿ ಮುನ್ನಡೆದು ವೈಚಾರಿಕ ಔನ್ನತ್ಯವನ್ನು ಮೆರೆದವರು ಇನ್ನು ಕೆಲವು ಶರಣೆಯರು. ಅವರ ಧೀರಸ್ವತಂತ್ರ ವ್ಯಕ್ತಿತ್ವವು ಅವರ ವಚನಗಳಲ್ಲೆ ಸ್ಫುಟಗೊಂಡಿದೆ. ಒಬ್ಬೊಬ್ಬರ ವಚನಗಳಲ್ಲಿ ಒಂದೊಂದು ಸ್ಥಲದ ವಿಶೇಷತೆಯೂ ಒಡೆದು ಕಾಣುತ್ತದೆ. ಮಹಾದೇವಿಯಕ್ಕನಂತೆ ವೈರಾಗ್ಯವನ್ನೇ ಅಪ್ಪಿಕೊಂಡು ಗಂಡೆದೆಯ ಕೆಚ್ಚನ್ನು ಮೆರೆದವಳು ಅಕ್ಕಮ್ಮ. ಅಕ್ಕಮ್ಮನ ವೈಚಾರಿಕ ನಿಲವೂ ಅಸಾಧಾರಣ ಮಟ್ಟದ್ದಾಗಿದೆ.

ವಚನಕಾರ್ತಿ ಅಕ್ಕಮ್ಮನ ಜೀವನ ಚರಿತ್ರೆಯ ಬಗೆಗೆ ಹೆಚ್ಚಿನ ವಿಷಯಗಳೇನೂ ತಿಳಿದು ಬಂದಿಲ್ಲ. ಈಕೆಯ ನಿಜವಾದ ಹೆಸರು ರೆಮ್ಮವ್ವೆ ಎಂದು ಹೇಳಲಾಗುತ್ತದೆ. ಆದರೆ ಇದಕ್ಕೆ ಖಚಿತವಾದ ಆಧಾರಗಳಿಲ್ಲ. ರೆಮ್ಮವ್ವೆ ಎಂಬ ಹೆಸರಿನ ನಾಲ್ಕೈದು ಜನ ವಚನಕಾರ್ತಿಯರಿದ್ದಂತೆ ತೋರುತ್ತದೆ. ಹೀಗಾಗಿ ಎಷ್ಟೋ ಸಲ ಅಕ್ಕಮ್ಮ ನನ್ನು ಬೇರೆ ರೆಮ್ಮವ್ವೆಯವರೊಡನೆ ತಪ್ಪಾಗಿ ಕಲ್ಪಿಸುವುದುಂಟು. 'ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗ ಎಂಬ ಅಂಕಿತವನ್ನಿಟ್ಟುಕೊಂಡ ಅಕ್ಕಮ್ಮ 150 ಕ್ಕೂ ಹೆಚ್ಚು ಸಂಖ್ಯೆಯ ವಚನಗಳನ್ನು ರಚಿಸಿದ್ದಾಳೆ. ಅಕ್ಕಮ್ಮ ವೀರವಿರಾಗಿಣಿಯಾಗಿದ್ದಳು. ಇವಳ ಸ್ವತಂತ್ರಧೀರ ವ್ಯಕ್ತಿತ್ವದಿಂದಾಗಿ ಮಾಹೇಶ್ವರ ಸ್ಥಲದ ನಿಲವನ್ನು ಸಾಧಿಸಲು ಸಾಧ್ಯವಾಯಿತು. ಸಂಸಾರದ ಆಶಾಪಾಶಗಳ ಭಯ ಅವಳಿಗೆ ಇರಲಿಲ್ಲ. ಇದರಿಂದ ಆಚಾರ ನಿಷ್ಠೆ ಇವಳಲ್ಲಿ ಹೆಚ್ಚು ಗಟ್ಟಿಗೊಂಡವು. ಅಂತಯೇ ಆಚಾರಕ್ಕೆ ನಿಷ್ಠೆಗೆ, ವೃತ, ಶೀಲಗಳಿಗೆ ಇವಳು ಹೆಚ್ಚು ಮಹತ್ವಕೊಟ್ಟಳು. ಅಂತರಂಗದಲ್ಲಿಯ ವ್ರತ, ಬಹಿರಂಗದ ಆಚಾರ ಇವು ಹೇಗಿರಬೇಕು ? ಆಚಾರ ವ್ರತ, ಶೀಲ ಇವುಗಳನ್ನು ಅರಿತು ಆಚರಿಸುವ ಬಗೆ ಎಂತಹದು ? ಎಂಬುದನ್ನು ಸವಿವರವಾಗಿ ಅಕ್ಕಮ್ಮ ತನ್ನ ಅಂತರಂಗದ ಅನುಭಾವದ ಒರೆಗಲ್ಲಿಗೆ ಹಚ್ಚಿ ವಿವರಿಸುತ್ತಾಳೆ. ಮಾಹೇಶ್ವರ ಸ್ಥಲದ ಮುಖ್ಯ ಲಕ್ಷಣವೆಂದರೆ ತದೇಕ ನಿಷ್ಠೆ. ಭಕ್ತನ ಆರಂಭದ ಸ್ಥಿತಿ ದೂರವಾಗಿ



ಈ ಸ್ಥಲದಲ್ಲಿ ಅವನ ನಿಷ್ಠೆ ಬಲಗೊಂಡು ಆಚಾರ, ಶೀಲ, ವ್ರತಗಳಲ್ಲಿ ಗಟ್ಟಿತನ ತೋರುತ್ತದೆ. ಲಿಂಗರೂಪಿಯಾದ ಶಿವನಲ್ಲಿ ಏಕನಿಷ್ಠೆ ನೆಲೆಗೊಂಡ ಬಳಿಕ ಅವನಿಗೆ ಅನ್ಯದೈವ, ತಾಮಸಿಕ ಆಚಾರ-ವಿಚಾರಗಳು ನಿಕೃಷ್ಟವೆನಿಸುತ್ತವೆ. ಅನ್ಯರು ಈ ಬಗೆಯ ಆಚಾರ ವಿಚಾರದಲ್ಲಿ ತೊಡಗಿದ್ದರೆ ಅವುಗಳನ್ನು ಮಾಹೇಶ್ವರ ಸ್ಥಲದಭಕ್ತ ಸಹಿಸಲಾರನು. ಅಂಥವುಗಳನ್ನು ಮನಸ್ವಿ ಖಂಡಿಸುತ್ತಾನೆ. ಈ ಬಗೆಯ ಮಾಹೇಶ್ವರ ಸ್ಥಲದ ಆಚರಣೆಯಲ್ಲಿದ್ದ ಅಕ್ಕಮ್ಮ ತನ್ನ ವಚನಗಳಲ್ಲಿ ಇವೇ ವಿಚಾರಗಳನ್ನು ಸ್ಪಷ್ಟವಾಗಿ ನಿರೂಪಿಸಿದ್ದಾಳೆ. ಹೆಜ್ಜೆ ಹೆಜ್ಜೆಗೆ ಅವಳು ಶೀಲ, ವ್ರತ, ಆಚಾರ, ನೇಮಗಳ ಬಗ್ಗೆ ಪದೇ ಪದೇ ಹೇಳುತ್ತಾಳೆ. ಈ ಕುರಿತು ಎಷ್ಟು ಹೇಳಿದರೂ ಅವಳಿಗೆ ತೃಪ್ತಿಯಿಲ್ಲ. ಅವಳ ಅಂಕಿತದಲ್ಲೂ 'ಆಚಾರವೆ ಲಿಂಗದ ಪ್ರಾಣ' ಎಂಬ ವಾಕ್ಯವನ್ನಿಟ್ಟುಕೊಂಡಿರುವುದೂ ಇದನ್ನೇ ಸೂಚಿಸುತ್ತದೆ.

ಶೀಲ, ಆಚಾರ, ವ್ರತಗಳ ಕುರಿತು ಅಕ್ಕಮ್ಮ ಖಚಿತವಾಗಿ ಹೇಳಿದ್ದಾಳೆ. ಕಾಮ, ಕ್ರೋಧ, ಮದ, ಮತ್ಸರ, ಲೋಭ, ಮೋಹಗಳನ್ನು ಬಿಟ್ಟವನು ಮಾತ್ರ ವ್ರತಸ್ಥನಾಗಲು ಸಮರ್ಥ ಕೊಡ. ಹಗ್ಗ ಹಾಗೂ ಗಡಗಡೆ ಇವು ಸರಿಯಾಗಿದ್ದಲ್ಲಿ ಭಾವಿಯೊಳಗಿನ ನೀರನ್ನು ಸುಲಭವಾಗಿ ಕೊಡದ ಮೂಲಕ ಪಡೆಯಲು ಸಾಧ್ಯವಾಗುವಂತೆ, "ಕಾಯ, ವಚನ, ಮನ" ತ್ರಿಕರಣ ಪೂರ್ವಕವಾಗಿ ಅಂಗಕ್ಕೆ ಆಚಾರ, ಆಚಾರಕ್ಕೆ ಅಱಿವು, ಅಱಿವು. ಅಱಿವಿಂಗೆ ಕುಱುಹು, ಕುಱುಹಿನಲ್ಲಿ ನೇಮುಕ್ಕೊಡಲಾಗಿ ಭಾವಕ್ಕೆ ರೂಪಾಗಿ ಭಾವಿಯ ನೀರತುಂಭ ತಂದುಕೊಡುವಂತೆ ........"....
ವ್ರತ ತಂದು ಕೊಡುತ್ತದೆ. ವ್ರತವೆಂದರೆ ತ್ರಿಕರಣ ಶುದ್ಧಾತ್ಮನಾಗಿ, ಅಂಗಕ್ಕೆ ಅಚಾರ ಮನಕ್ಕೆ ಅಱಿವು. ಅಱಿವಿಂಗೆ ಜ್ಞಾನ ನಿರ್ಧರವಾಗಿ ಕರಿಗೊಂಡುದೆ ವ್ರತ—(37) ವ್ರತ ಹಿಡಿದವನು ಆಚಾರ ಶುದ್ಧನಾಗಿರಬೇಕಾದುದು ತೀರ ಅವಶ್ಯಕ. ಗಂಡನೆದುರಿಗಿದ್ದಾಗ ಅವನ ಸತಿಯನ್ನು ಮಾತಿನಲ್ಲಿ ಅವ್ವಾ, ಅಮ್ಮಾ ಎನ್ನುವುದು ಗಂಡನಿಲ್ಲದಾಗ ಅವಳನ್ನು ತನ್ನ ಸತಿಯೆಂಬಂತೆ ಭಾವಿಸುವ ಭಂಡರಿಗೆ–ವ್ರತ ನೇಮ ಏತಕ್ಕೆ? ಎಂದು ಅಕ್ಕಮ್ಮ ಪ್ರಶ್ನಿಸುತ್ತಾಳೆ. ಕಾಮುಕಗೆ, ದುರ್ಜನಗೆ, ಕಪಟಿಗೆ, ಹೇಮಚೋರಂಗೆ.... ವ್ರತಸಲ್ಲದು. ಹೇಗೆಂದರೆ 'ಕಾಗೆಗೆ ರಸ್ನಾನ್ನ ಮುಂದಿರಲಿಕೆ ಹರಿವ ಕೀಟಕಂಗೆ ಸರಿವುದಲ್ಲದೆ ಮತ್ತೆ ಅದು ಸವಿಯ ಸಾರವ ಬಲ್ಲದೆ?" (26) ಆಚಾರ ತಪ್ಪಿದಲ್ಲಿ ಪ್ರಾಯಶ್ಚಿತ್ತ ಇಲ್ಲವೆಂದು ಅಂಥ ಅನಾಚಾರಿಗಳ ಮುಖವನ್ನು ನೋಡಲಾಗದೆಂದು ಅಕ್ಕಮ್ಮ ಸ್ಪಷ್ಟವಾಗಿ ಹೇಳುತ್ತಾಳೆ. (10) ವ್ರತಸ್ಥನಾದವನಿಗೆ ಸರಸ, ಸಮೇಳ, ಪಗುಡಿ, ಪರಿಹಾಸ, ಚದುರಂಗ, ನೆತ್ತಪಗಡಿ, ಸಲ್ಲವೆಂದು ಸಾರಿದ್ದಾಳೆ. (76) ಕಾಯಕ-ಮಾಡುವ ಭಕ್ತನಂಗಳವೇ ಕೈಲಾಸ. (31) ಎಂದು ನಂಬಿರುವ ಅಕ್ಕಮ್ಮ ಆಚಾರ ಶೀಲ ವ್ರತಗಳೆಲ್ಲ ಜಂಗಮ ಮುಖದಲ್ಲಿ ಶುದ್ಧವಾಗುತ್ತವೆಂದು ಹೇಳಿದ್ದಾಳೆ.

"............ಇಂತೀ ವ್ರತನೇನು ಶೀಲಂಗಳೆಲ್ಲವು
ಜಂಗಮದ ಮುಂದಿಟ್ಟು ಶುದ್ಧತೆಯಹ ಕಾರಣ
ಅ ಜಂಗಮದಲ್ಲಿ ಅರ್ಥ, ಪ್ರಾಣ, ಅಭಿಮಾನಕ್ಕೆ ಕಟ್ಟುಮಾಡಿದೆನಾದಡೆ
ಎನಗದೆ ದ್ರೋಹ

ಆ ಜಂಗಮದ ದರ್ಶನದಿಂದ ಸಕಲದ್ರವ್ಯ ಪವಿತ್ರ,
ಆ ಜಂಗಮದ ಪಾದತೀರ್ಥದಿಂದ ಘನಲಿಂಗಕ್ಕೆ ಜೀವಕಳೆ,
ಆ ಜಂಗಮದ ಪ್ರಾಸಾದದಿಂದ ಘನಲಿಂಗಕ್ಕೆ ತೃಪ್ತಿ
ಇಷ್ಟನಱಿತಲ್ಲಿ ಜಂಗಮಲಿಂಗಕ್ಕೆ ಸಂದೇಹ ಮಾಡಿದಡೆ
ಎನಗೆ ಕುಂಭಿಪಾತದಲ್ಲಿ ನಾಯಕನರಕ ತಪ್ಪದು
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗ ಸಹಿತಾಗಿ ಮುಳುಗುವೆನು (19)

ಆಚಾರವಿಲ್ಲದೆ ತತ್ತ್ವಹೇಳುವವರನ್ನು ಅಕ್ಕಮ್ಮ ನಿರ್ದಾಕ್ಷಣ್ಯವಾಗಿ ಖಂಡಿಸಿದ್ದಾಳೆ–

"............ಆಡಂಬರದ ವೇಷಧರಿಸಿ
ಉದಕವ ಹೊಯ್ದು ಸ್ವಯ ಚರಪರ ಷಟಸ್ಥಲವ ಬೊಗಳುವ
ಕುನ್ನಿಗಳ ಕಂಡು ನಾಚಿತ್ತು ಕಾಣಾ ಎನ್ನ ಮನವು............[70]

ಇದೇ ರೀತಿ ಕಪಟ ವಿರಕ್ತರನ್ನು ತರಾಟೆಗೆ ತೆಗೆದುಕೊಂಡಿದ್ದಾಳೆ.

'ಮಾಡಿ ನೀಡುವ ಭಕ್ತನನಟಿಸಿಕೊಂಡು ಹೋಗಿ
ಗಡ್ಡಮಂಡೆ ಬೋಳಿನ ಕುಱುಹ ತೋಱ
ಬಲ್ಲವರಂತೆ ಅಧ್ಯಾತ್ಮವ ನುಡಿದು
ಉಪಾಧಿಯಿಂದ ಒಡಲ ಹೊರೆವಾತ ವಿರಕ್ತನೆ ? ಅಲ್ಲ.
ವಿರಕ್ತನ ಪರಿ ಎಂತೆಂದಡೆ

ಆಚಾರ ಸಹಿತವಾಗಿ ಭಕ್ತಿ ಬಿಕ್ಷವ ತೆಗೆದುಕೊಂಡು
ಉಪಾಧಿರಹಿತವಾಗಿಪ್ಪ ವಿರಕ್ತನ ತೋಱಿ ಬದುಕಿಸಯ್ಯ
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗವೆ (77)

ಅನ್ಯದೈವದವರನ್ನು ಕಂಡು ಅವರಂತೆ ಅನುಕರಣೆ ಮಾಡುವವರನ್ನು ಬತ್ತಲೆ ಇದ್ದವರೆಲ್ಲ, ಕತ್ತೆಯ ಮಕ್ಕಳು; ಹೋತಿನ ಗಡ್ಡದ ಹಿರಿಯರ ನೋಡಾ; ತಲೆಬೋಳಾದವರೆಲ್ಲ ಮುಂಡೆಯ ಮಕ್ಕಳು ತಲೆ ಜಡೆಗಟ್ಟಿದವರೆಲ್ಲ ಹೊಲೆಯರ ಸಂತಾನ ಮುಂತಾಗಿ ಕಟುವಾಗಿ ಟೀಕಿಸಿದ್ದಾಳೆ.

ಮಹೇಶ್ವರ ಸ್ಥಲದ ಸ್ಪಷ್ಟವಾದ ಲಕ್ಷಣಗಳನ್ನು ಹೊಂದಿದ್ದು ತನ್ನ ಸಮಕಾಲೀನ ಸಮಾಜ, ಧರ್ಮ, ನೀತಿ-ಅನೀತಿ, ಶೀಲ-ಸ್ವಭಾವ, ನಂಬಿಕೆ-ನೇಮ, ಮುಂತಾ



ದವುಗಳನ್ನು ತನ್ನ ಅನುಭವದ ನಿಕಷದಲ್ಲಿ ಅದ್ದಿ ತೆಗೆದು ಸುಂದರವಾಗಿ ಅಕ್ಕಮ್ಮ ವಚನಗಳಲ್ಲಿ ಅಭಿವ್ಯಕ್ತಿಸಿರುವುದರಿಂದ ಅವಳ ವಚನಗಳಮೌಲ್ಯ ಹೆಚ್ಚಿದೆ. ಅವಳು ನೀಡುವ ಉಪಮೆಗಳು, ಪ್ರತಿಮೆ, ಸಂಕೇತಗಳು ವಚನಗಳಿಗೆ ಸಾಹಿತ್ಯಿಕ ಅಂಶವನ್ನು ಲೇಪಿಸಿವೆ. ಮಹಿಳೆಯೊಬ್ಬಳು ಒಂದು ಧರ್ಮದ ಚೌಕಟ್ಟಿನಲ್ಲಿ ಅಚ್ಚುಕಟ್ಟಾಗಿ ತನ್ನ ವೈಚಾರಿಕತೆಯನ್ನು ಅಭಿವ್ಯಕ್ತಿಸಿರುವುದೇ ತೀರ ಮಹತ್ವದ ಅಂಶವಾಗಿದೆ. ಅಕ್ಕಮ್ಮನ ಚಾರಿತ್ರಿಕ ಅಂಶಗಳು ನಮಗೆ ಅಷ್ಟಾಗಿ ತಿಳಿದು ಬರದಿದ್ದರೂ ಅವಳ ವಚನಗಳಿಂದ ಪ್ರಾಯಶಃ ಅವಳು ಸಾಮಾನ್ಯ ಒಕ್ಕಲಿಗರ ಕುಟುಂಬವೊಂದರಿಂದ ಬಂದಿರಬಹುದೆಂದು ಊಹಿಸಬಹುದಾಗಿದೆ. ಅವಳ ಊರಿನಲ್ಲಿ 'ರಾಮೇಶ್ವರಲಿಂಗ' ದೇವಸ್ಥಾನ ಇರಬೇಕು. ಬಸವಣ್ಣನವರು ಕೂಡಲ ಸಂಗಮನಾಥನನ್ನು ತಮ್ಮ ಅಂಕಿತಕ್ಕೆ ಬಳಸಿಕೊಂಡಂತೆ ಅಕ್ಕಮ್ಮನೂ ರಾಮೇಶ್ವರಲಿಂಗವನ್ನು ಬಳಸಿಕೊಂಡಿರಬೇಕು. ಅಕ್ಕಮ್ಮ ಪ್ರಾಯಶಃ ಕೃಷಿ ಕಾಯಕ ಮಾಡುತ್ತಿರಬಹುದೆಂದು ತೋರುತ್ತದೆ. ಅವಳ ವಚನಗಳಲ್ಲಿ ಈ ಕಾಯಕಕ್ಕೆ ಸಂಬಂಧಿಸಿದ ಶಬ್ದಗಳು ಹೇಳಿಕೆಗಳು ಅಲ್ಲಲ್ಲಿ ಬಂದಿವೆ.

ಅಕ್ಕಮ್ಮನ ಸಮಗ್ರ ವಚನಗಳನ್ನು ಕ್ರಿ ಶ. 1968 ರಲ್ಲಿ ಪ್ರಪ್ರಥಮ ಬಾರಿಗೆ ಡಾ. ಆರ್.ಸಿ. ಹಿರೇಮಠ ಅವರು ಸಂಪಾದಿಸಿದ್ದು ಕರ್ನಾಟಕ ವಿಶ್ವವಿದ್ಯಾಲಯದಿಂದ ಅವು ನಮಗೆ ರಾಯಮ್ಮನ ವಚನಗಳೊಂದಿಗೆ ಪ್ರಕಟವಾಗಿವೆ. ಆದರಲ್ಲಿ ಒಟ್ಟು 153 ಅಕ್ಕಮ್ಮನ ವಚನಗಳಿವೆ. ಆದರಲ್ಲಿ ಕೆಲವು ಅಕ್ಕಮ್ಮನವು ಅಲ್ಲದ ವಚನಗಳೂ ಸೇರಿ೭ ತೆ ತೋರುತ್ತದೆ. ಉದಾಹರಣೆಗೆ–

'ಬಸವಣ್ಣ, ಚನ್ನಬಸವಣ್ಣ, ಪ್ರಭು, ವೀರಮಡಿವಳ, ನಿಜಗುಣ ಶಿವಯೋಗಿ........ ಎಂಬ ವಚನವನ್ನು ಉದಾಹರಿಸಬಹುದು. ಇಲ್ಲಿ ಅಕ್ಕಮ್ಮನ ಕಾಲದವರಲ್ಲದ ನಿಜಗುಣ ಶಿವಯೋಗಿಯ ಹೆಸರು ಸೇರಿರುವುದು. ವಚನದ ಅನೇಕ ಪಾಠಗಳು ಬೇರೆ ಹಸ್ತಪ್ರತಿಗಳಲ್ಲಿ ದೊರೆಯದೆ ಇರುವುದು, ಅಕ್ಕಮ್ಮನ ವಚನಗಳ ಭಾಷೆಗೂ ಈ ವಚನ ಭಾಷೆಗೂ ವ್ಯತ್ಯಾಸವಿರುವುದು. ಈ ದೃಷ್ಟಿಗಳಿಂದ ಈ ವಚನ ಅಕ್ಕಮ್ಮನದಲ್ಲವೆಂದು ಹೇಳಬಹುದಾಗಿದೆ

ಅಕ್ಕಮ್ಮನು ಸಾಧಾರಣ ಒಕ್ಕಲು ಮನೆತನದಿಂದ ಬಂದಿರಬಹುದಾದರೂ ಅವಳು ತನ್ನ ವಚನದಲ್ಲಿ ತೋರಿರುವ ಭಾಷಾಪ್ರೌಢಿಮೆ ಸಂಸ್ಕೃತ-ಕನ್ನಡ ಶಬ್ದಗಳ ಆಯ್ಕೆಯ ಹಿತಮಿತ ಬಳಕೆ ಅವಳ ಪಾಂಡಿತ್ಯವನ್ನು ಎತ್ತಿ ತೋರುತ್ತದೆ. ಅವಳು ಸಂಸ್ಕೃತ–ಕನ್ನಡಗಳನ್ನು ಚೆನ್ನಾಗಿಯೇ ಓದಿಕೊಂಡಿದ್ದಳೆಂಬುದೂ ಇದರಿಂದ ತಿಳಿದು ಬರುತ್ತದೆ. ಅವಳ ವಚನಗಳ ಸರಿಯಾದ ಅಧ್ಯಯನ ನಡೆಯಬೇಕಾದ ಅವಶ್ಯಕತೆ ಇದೆ.

## ಮನುಸ್ಮೃತಿ -ವರವೋ ? ಶಾಪವೋ ? ಒಂದು ಚಿಕಿತ್ಸಕ ನೋಟ

ನುಹಾಂಕೇಶ ಮಲ್ಲನಗೌಡ, ಇಂಗ್ಲೀಷ್ ಉಪನ್ಯಾಸಕರು, ಸರ್ಕಾರಿ ಕಾಲೇಜು ಕೊಪ್ಪಳ-583231

ಸುಮಾರು 20 ಶತಮಾನದಿಂದ ಭಾರತದ ಜೀವನದ ಮೇಲೆ ಅಪ್ರತಿಮ ಪ್ರಭಾವವನ್ನು ಬೀರಿರುವ ಮನಸ್ಮೃತಿ ಅವಲೋಕಿಸಬೇಕಾದ ಮಹತ್ಕೃತಿ. ಇದು ವರವೋ? ಶಾಪವೋ ? ಎಂಬುದನ್ನು ನಿರ್ಧರಿಸಲಿಕ್ಕೆ ಯಾವುದನ್ನು ಮಾನದಂಡವಾಗಿ ಉಪಯೋಗಿಸಬೇಕೆನ್ನುವುದು ಚರ್ಚಾಸ್ಪದ. ಎಲ್ಲ ಧರ್ಮಗ್ರಂಥಗಳ ಹಾಗೆ ಹಿಂದೂ ಧರ್ಮದ ತಳಹದಿ ಗ್ರಂಥವಾದ ಮನುಸ್ಮೃತಿಯೂ ಕೂಡಾ ಬದಲಾದ ಸಾಮಾಜಿಕ ಆರ್ಥಿಕ, ರಾಜಕೀಯ, ಮುಂತಾದ ಮೌಲ್ಯಗಳ ಹಿನ್ನೆಲೆಯಲ್ಲಿ ವಿವಾದಾಸ್ಪದವಾಗಿರುವದು ಸಹಜ. ಇದರಲ್ಲಿಯ ಎಲ್ಲ ವಿಚಾರಗಳು ಪ್ರಶ್ನಾರ್ಹವಲ್ಲವೆಂದು ಅನ್ನಬಹುದಾದರೂ ಅದು ಪ್ರತಿಪಾದಿಸುವ ಶೂದ್ರ ಸಿದ್ಧಾಂತ, ಹಾಗೂ ಮಹಿಳಾ ಸಿದ್ಧಾಂತ, ಆಧುನಿಕ ಸಮಾಜಕ್ಕೆ ಆತಂಕಾರಿಯಾಗಿದೆಯೆಂದರೆ ತಪ್ಪಾಗಲಾರದು.

ಸುಮಾರು 2684 ಶ್ಲೋಕಗಳನ್ನು 12 ಅಧ್ಯಾಯಗಳಲ್ಲಿ ಹೊಂದಿರುವ ಮನುಸ್ಮೃತಿ ವರ್ಣಾಶ್ರಮ ಧರ್ಮವನ್ನು ಪ್ರತಿಪಾದಿಸುವುದರೊಂದಿಗೆ ಹಾಗೂ "ನ ಸ್ತ್ರೀಸ್ವಾತಂತ್ರ್ಯಂ ಅರ್ಹತಿ„ ಎಂದು ಹೇಳುವುದರೊಂದಿಗೆ ಈಗ ಬದಲಾವಣೆ ಸಾಮಾಜಿಕ ಪರಿಸ್ಥಿತಿಯಲ್ಲಿ ವಿವಾದಕ್ಕೊಳಗಾಗಿದೆಯಷ್ಟೇ ಪರಿಣಮಿಸಿದೆ. ಸಾಮಾಜಿಕ ಅಸಮತೋಲನಕ್ಕೆ ಅಲ್ಲ ಮಾರಕವಾಗಿಯೂ ಕಾರಣವಾಗಿದೆ.

ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನ ಮಾತು "ಚಾತುರ್ವರ್ಣ್ಯಂ ಮಯಾ ಸೃಷ್ಟ್ಯಂ ಗುಣ ಕರ್ಮ ವಿಭಾಗಶಃ" ಎಂದು ಬಂದಿದ್ದು ಮನುಸ್ಮೃತಿಯ ಸಿದ್ಧಾಂತವು ಅದಕ್ಕೆ ಪೂರಕವಾಗಿಯೆ ಇದೆ. ಹಿಂದಿನ ಮಾನವವಾದಿ ಸಿದ್ಧಾಂತದ ಪ್ರಭಾವದಲ್ಲಿ ಈ ಸಿದ್ಧಾಂತವು ಸಾಮಾಜಿಕ, ಅಸಮಾನತೆಗೆ ಕಾರಣವಾಗಿದೆ. ನಾಲ್ಕು ವರ್ಣಾಶ್ರಮಗಳನ್ನು ಸ್ಥಾಪಿಸುವುದರ ಜೊತೆಗೆ ಭಾರತೀಯ ಸಮಾಜದಲ್ಲಿ ಸುಮಾರು 3000 ಜಾತಿಗಳ ಹುಟ್ಟುವಿಕೆಗೂ ಅಪ್ರತ್ಯಕ್ಷವಾಗಿ ಕಾರಣವಾಗಿದೆ. ಅಧ್ಯಾಯ 10ರ 3ನೇ ಶ್ಲೋಕ ಈ ರೀತಿ ಇದೆ.

"ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನು ಪ್ರಭುವು, ಸಂಸ್ಕಾರ, ನಿಯಮ, ಪ್ರಕೃತಿ ವಿಶೇಷಗಳು ಹೆಚ್ಚುಗಾರಿಕೆಗಳು, ಇದರ ತೀರ್ಮಾನವು ಕ್ಷಣಿಕವಲ್ಲ."

ಈ ಸಿದ್ಧಾಂತವು ಮೇಲು-ಕೀಳುಭಾವನೆ ಸೃಷ್ಟಿಮಾಡಿತಲ್ಲದೆ ಅಮಾನವೀಯ ಅಸ್ಪೃಶ್ಯತೆಗೂ ಕಾರಣವಾಯಿತು. ಅದೇ ಅಧ್ಯಾಯದ 4ನೇ ನುಡಿ ಈರೀತಿ ಹೇಳುತ್ತದೆ.



"ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಎಂದು ಮೂವರು ಉಪನಯನವುಳ್ಳವರು ಉಳಿದವರೆಲ್ಲ ಒಂದೇ ಜಾತಿ. ಪಂಚಾಮರೆಲ್ಲ. ಇದು ಶಾಸ್ತ್ರ ಸಂಪ್ರದಾಯವು"

ಸಮಾಜದಲ್ಲಿ ಅಮಾನವೀಯ ಅಸ್ಪೃಶ್ಯತೆ ಸೃಷ್ಟಿಸಿ ಅವರಿಗ ಜ್ಞಾನಾರ್ಜನೆಯನ್ನು ಅಲ್ಲಗಳೆದು, ವೇದೋಪನಿಷತ್ತುಗಳನ್ನು ಕೇಳಿದರೆ ಕಿವಿಯಲ್ಲಿ ಕಾದ ಸೀಸ ಹಾಕಬೇಕೆಂಬ ನಿಯಮ ಮಾಡಿ ಅವರನ್ನು ಪ್ರಾಣಿಗಳಿಗಿಂತ ಕೀಳಾಗಿ ಕಂಡದ್ದು ಸಮಾಜಕ್ಕೆ ತುಂಬಲಾರದ ಹಾನಿಯಾಗಿದೆ. 10ನೇ ಅಧ್ಯಾಯದಲ್ಲಿ ಬರುವ ಈ ಮಾತುಗಳು ಅದಕ್ಕೆ ಪೂರಕವಾಗಿವೆ.

'ಊರ ಹೊರಗೆ ಚಂಡಾಲಾದಿಗಳ ವಾಸಸ್ಥಾನ. ಒಳ್ಳೆಯ ಪಾತ್ರೆಗಳನ್ನು ಅವರು ಉಪಯೋಗಿಸಬಾರದು. ನಾಯಿ, ಕತ್ತೆ, ಅವರ ಸೊತ್ತು. ಹೆಣದ ಬಟ್ಟೆ ಅವರ ಉಡುಗೆ. ಒಡೆದ ಪಾತ್ರೆಯಲ್ಲಿ ಊಟ ಕಬ್ಬಿಣದ ಬಳೆ, ಉಂಗುರ ತೊಡುಗೆ, ಸದಾಸಂಚಾರ. ಧರ್ಮ ಕಾರ್ಯದಲ್ಲಿ ಅವರ ವ್ಯವಹಾರವು ಬೇಡ. ಅವರಿಗೆ ಅಂತವರೊಡನೆ ವಿವಾಹ ಸಂಬಂಧವು. ಕೂಲಿಯವರ ಮೂಲಕ ಅವರಿಗೆ ಒಡೆದು ಬೇಡವಾದ ಪಾತ್ರೆಯಲ್ಲಿ ಆಹಾರ ಕೊಡಬಹುದು. ರಾತ್ರಿ ಅವರು ಗ್ರಾಮ, ನಗರಗಳಲ್ಲಿ ಸಂಚರಿಸಬಾರದು.'

ಮಹಿಳೆಯ ಬಗೆಗಂತೂ ಮನುಸ್ಮೃತಿಯ ನಿಲುಮೆ ಬಹಳ ಆತಂಕಕಾರಿ ಹಾಗೂ ಅಪಾಯಕಾರಿಯಾಗಿದೆ. ಸ್ತ್ರೀಯನ್ನು ಬಾಲ್ಯದಲ್ಲಿ ತಂದೆ, ಯೌವ್ವನದಲ್ಲಿ ಗಂಡ, ಮುಪ್ಪಿನಲ್ಲಿ ಮಕ್ಕಳು ರಕ್ಷಿಸುತ್ತಾರೆ. ಆದುದರಿಂದ "ನ. ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ" ಎಂಬುದರ ನಿಲುವು ಪುರುಷಪ್ರಧಾನ ಸಮಾಜಕ್ಕೆ ಪೂರಕವಾಗಿ ಸ್ತ್ರೀಯ ಶೋಷಣೆಗೆ ನಾಂದಿ ಹಾಡಿತು ಎಂದರೂ ತಪ್ಪಾಗಲಿಕ್ಕಿಲ್ಲ. ಮನುಸ್ಮೃತಿಯ 9ನೇ ಅಧ್ಯಾಯದಲ್ಲಿ ಬರುವ ಕೆಲವು ಶ್ಲೋಕಗಳು ತುಂಬಾ ಕಟುವಾಗಿದ್ದು ಸ್ತ್ರೀಯನ್ನು ಕೀಳಾಗಿ ಕಂಡಿವೆ. ಕೆಲವು ಶೋಕಗಳು ಈ ರೀತಿ ಇವೆ.

1 ಮದ್ಯಪಾನ, ದುಷ್ಟಸಹವಾಸ, ಅತಿವಿರಹ, ಅರೆನಿದ್ದೆ, ಪರಿಗ್ರಹವಾಸ ಇವುಗಳು ಸ್ತ್ರೀ ಶೀಲವನ್ನು ಕೆಡಿಸುವ 6 ಸುಲಭ ಮಾರ್ಗಗಳು (ಶ್ಲೋ 13)

2 ಸ್ತ್ರೀಯರ ಕಾಮುಕತನವು ಸೌಂದರ್ಯ, ವಯಸ್ಸು ಒಂದನ್ನೂ ಗಣಿಸುವುದಿಲ್ಲ ಕುರೂಪಿಗೂ, ಮುದುಕನಿಗೂ, ಹುಡುಗನಿಗೂ, ಒಲಿಯುತ್ತಾಳೆ.(ಶ್ಲೋ 14)

3 ಸ್ತ್ರೀಯರ ಮನಸ್ಸು ಪುರುಷಗತಿವುಳ್ಳದ್ದು. ಚಂಚಲ, ಸ್ನೇಹಹೀನ

ಈ ಸ್ವಭಾವವು ಜನ್ಮಸಿದ್ಧವಾದುದರಿಂದ ಹೆಂಗಸರು ಮನೆಯೊಳಗಿದ್ದರೂ ಗಂಡಸಲ್ಲಿ ವಿಕಾರ ಹೊಂದುತ್ತಾರೆ. (ಶ್ಲೋ 15)

4 ಮಲಗುವುದು, ಕುಳಿತುಕೊಳ್ಳುವುದು, ಅಲಂಕಾರಗಳಲ್ಲಿ ಪ್ರೀತಿ, ಕಾಮ, ಕ್ರೋಧ, ಕಪಟ, ದ್ರೋಹ, ದುರ್ವರ್ತನೆ, ಮನೋವಿಕಾರಗಳು ಸ್ತ್ರೀಯರಿಗೆ ಜನ್ಮ ಸಿದ್ಧವಾದವುಗಳು. (ಶ್ಲೋ 17)

ಈ ಮೇಲಿನ ಶ್ಲೋಕಗಳನ್ನು ನೋಡಿದಾಗ ಯಾರಿಗೇ ಆಗಲಿ ಮನಸ್ಮೃತಿಯು ಅಸ್ಪೃಶ್ಯರ ಬಗ್ಗೆ, ಹಾಗೂ ಮಹಿಳೆಯರ ಬಗ್ಗೆ ಎಷ್ಟೊಂದು ಕಟುವಾಗಿದೆ ಎಂಬುದನ್ನು ತೋರಿಸುತ್ತದೆ.

ವರ್ಣಾಶ್ರಮ ಧರ್ಮಪದ್ಧತಿ ಲೌಕಿಕವಾಗಿದ್ದು ಅದು ತತ್ವಜ್ಞಾನಿ ಪ್ಲೇಟೋನ ವರ್ಗಕರ್ತವ್ಯಗಳು (Class duties) ಹಾಗು F. 4 Bradley ಯವರ My station and its duties ಹೋಲುತ್ತದೆ. ಆದರೆ ಪಾಶ್ಚಾತ್ಯ ಸಮಾಜದತ್ತ ಆ ಸಿದ್ಧಾಂತವು ಕ್ರೂರ ವ್ಯವಸ್ಥೆಗೆ ದಾರಿ ಮಾಡಿ ಕೊಡದೇ ಭಾರತದ ಸಮಾಜದಲ್ಲಿ ಮಾತ್ರ ಈ ರೀತಿಯಾಗಿದ್ದು ನಿಜಕ್ಕೂ ದುರದೃಷ್ಟಕರ.

ಹಲವಾರು ಗ್ರಂಥಗಳ ಅಡಿಯಲ್ಲಿ ಹಿಂದೂ ಸಮಾಜವು ಬೆಳೆದು ಬಂದಿದ್ದು ಮನುಸ್ಮೃತಿಯ ಪ್ರಭಾವವು ವಿಶಿಷ್ಟವಾಗಿದೆ. ಹಿಂದೂ ಧರ್ಮದ ಗ್ರಂಥವಾದ ಮನುಸ್ಮೃತಿಯನ್ನು ಸಮಾಜಕ್ಕೆ ಮಾರಕ ಎಂದು ಹೇಳಿದಲ್ಲಿ ಯಾರಿಗೆ ಆಗಲಿ ಆತಂಕ ಬರುವುದು ಸಹಜ. 21 ಶತಮಾನಕ್ಕೆ ಕಾಲಿಡುತ್ತಿರುವ ಹಿಂದೂ ಸಮಾಜ ಹೊಸ ವ್ಯವಸ್ಥೆಯನ್ನು ಮಾಡಿಕೊಳ್ಳುವುದು. ಆಧುನಿಕ ವಿಚಾರಗಳಿಗೆ ಸ್ಪಂದಿಸುವದು. ವೈಜ್ಞಾನಿಕ ಧರ್ಮವನ್ನು ಸ್ಥಾಪಿಸುವುದು. ವೈಚಾರಿಕ ತಳಹದಿಯ ಮೇಲೆ ತತ್ವಶಾಸ್ತ್ರ, ನಿಲ್ಲಿಸುವುದು ಬಹಳೇ ಅವಶ್ಯ. ಧರ್ಮಗ್ರಂಥಗಳನ್ನು ಬದಲಾವಣೆ ಮಾಡಬೇಕೆಂದು ಕೂಡಲೇ "ಮರಣದಂಡನೆ" ವಿಧಿಸುವ ಮೂಲಭೂತವಾದಿಗಳು ತುಂಬಿರುವ ಈ ಶತಮಾನದಲ್ಲಿಯೂ ಸಹಿತ ಬದಲಾವಣೆಯಾಗಬೇಕೆಂಬ ಮಾತೇಳುವುದು ಅನಿವಾರ್ಯ. ಕುವೆಂಪುರವರ ಕವನದ ಈ ನಾಲ್ಕು ಸಾಲುಗಳು ಅರ್ಥಪೂರ್ಣವಾಗಿವೆ.

" ಹಿಂದಿನ ಋಷಿಗಳೂ ಮಾನವರೇ ನಮ್ಮಂತೆ
ಅವರ ಶಾಸ್ತ್ರವು ಅವರ ಕಾಲಕ್ಕೆ ಮಾತ್ರ
ಕಾಲಕ್ಕೆ ತಕ್ಕಂತೆ ದೇಶಕ್ಕೆ ತಕ್ಕಂತೆ
ನಮ್ಮ ಹೃದಯವೇ ನಮಗೆ ಶ್ರೀ ಧರ್ಮಸೂತ್ರ."



# ವ ಚ ನ ದೀ ಪ್ತಿ

## (ಆಧಾರ- ಬಸವಣ್ಣನವರ ವಚನಗಳು)

ವಿದ್ವಾನ್ ಎಸ್. ಷಡಕ್ಷರಿ, ಉಪಪ್ರಾಧ್ಯಾಪಕರು, ಸಂಸ್ಕೃತ ಕಾಲೇಜು ಶ್ರೀ ಸಿದ್ಧಗಂಗಾ ಮಠ.

ಹಿಂದೂ ಧರ್ಮ ವಿಶಾಲವಾದುದು. ಈ ಧರ್ಮದಲ್ಲಿ ವೇದಗಳ ಕಾಲದಿಂದ ಕಾಯಕದ ಆಧಾರದ ಮೇಲೆ ವರ್ಣವ್ಯವಸ್ಥೆ ಇದ್ದಿತು. ಯಾವುದೇ ಒಂದು ವರ್ಣವು ಮತ್ತೊಂದು ವರ್ಣಕ್ಕಿಂತ ಉತ್ತಮ, ಅಧಮವೆಂಬ ಘರ್ಷಣೆಗೆ ಮನ ಮಾಡಿದಂತಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ರಾಜಕೀಯ ಮನೋಭಾವಗಳು ಬಂತು, ಚಾತುರ್ವರ್ಣ್ಯಗಳಲ್ಲಿ ಮೊದಲನೆಯದು ಉತ್ತಮ ನಾಲ್ಕನೆಯದು ಅಧಮವೆಂದು ಕೊನೆಯದಾಗಿ ಪಂಚಮ ವರ್ಣದ ಸೃಷ್ಟಿಯಾಗಿ ಅದಕ್ಕೆ ಅಸ್ಪೃಶ್ಯವೆಂದು ಹೆಸರಿಟ್ಟರು. ಇದರಿಂದ ಸಮಾಜ ಛಿದ್ರವಾಯಿತು. ಪರಸ್ಪರ ವ್ಯಾಕುಲ ಸನ್ನಿವೇಶಗಳು ತಲೆದೋರಿದವು. ಲೋಕೋದ್ಧಾರ ಉತ್ತಮ ಕುಲದವರಿಂದ ಮಾತ್ರ ಸಾಧ್ಯವೆಂಬ, ಅಸತ್ಯ ಕಲ್ಪನೆಗಳು ಆವರಿಸಿದವು. ಇದೂ ಸಾಲದೆಂಬಂತೆ ಉತ್ತಮರೆನಿಸಿಕೊಂಡವರು ತಮ್ಮ ಸ್ವಾರ್ಥದ ಬೇಳೆಯನ್ನು ಈ ಕಲ್ಪನೆಯ ಮರೆಯಲ್ಲಿ ಬೇಯಿಸಿಕೊಂಡು ಮೆರೆದರು. ದಲಿತ ವರ್ಗದವರು ತಾವು ದೌರ್ಭಾಗ್ಯರೆಂದು, ಅಶಕ್ತರೆಂದು ತಮ್ಮಿಂದ ಯಾವುದೂ ಉದ್ಧಾರವಾಗದೆಂದು ಭಾವಿಸಿ ಮೂಲೆಗುಂಪಾದರು. ಇದರ ಪರಿಣಾಮದಿಂದಾಗಿ ಸಮಾಜೋದ್ಧಾರ ಅಸ್ತವ್ಯಸ್ತವಾಗತೊಡಗಿತು. ಸಾಮಾಜಿಕ ಚೈತನ್ಯ ಕುಂಠಿತವಾಯಿತು ಇಂತಹ ಪರಿಸ್ಥಿತಿಯಲ್ಲಿ ಕೇವಲ ಕುಲದಿಂದ ಮಾತ್ರ ಉತ್ತಮ ವರ್ಗವೆನಿಸಿ ಕೊಂಡವರನ್ನು ಮೂದಲಿಸಿ ದಲಿತವರ್ಗವನ್ನು ಹುರಿದುಂಬಿಸಿದ ವಿಶ್ವಮಾನವ ಬಸವಣ್ಣ ತಮ್ಮ ವಚನದಲ್ಲಿ ಹೀಗೆ ಹೇಳಿದರು

ವ್ಯಾಸ ಬೋಯಿತಿಯ ಮಗ ।
ಮಾರ್ಕಾಂಡೇಯ ಮಾತಂಗಿಯ ಮಗ
ಮಂಡೋದರಿ ಕಪ್ಪೆಯ ಮಗಳು
ಕುಲವನರಸದಿರಿ ಭೋ ।
ಕುಲದಿಂದ ಮುನ್ನೇನಾದಿರಿ ಭೋ ।
ಸಾಕ್ಷಾದಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ
ಕಶ್ಯಪ ಕಮ್ಮಾರ, ಕೌಂಡಿಣ್ಯನೆಂಬ ಋಷಿ
ಮೂರು ಲೋಕವರಿಯೆ ನಾವಿಂದ ಕಾಣಿ ಭೋ
ನಮ್ಮ ಕೂಡಲ ಸಂಗನ ವಚನ ವಿಂತೆಂದುದು. ಶ್ವಪಚೋಪಿಯಾದ
ರೇನು ಶಿವಭಕ್ತನೇ ಕುಲಜಂ ಭೋ ॥

ಪುರಾಣ, ಇತಿಹಾಸ, ವೇದ ಮಂತ್ರಗಳ ಮೊದಲ ಪ್ರವರ್ಧಕನಾದ ಮಹರ್ಷಿ ವ್ಯಾಸ ಬೋವಿ ಜಾತಿಯವನು. ಮೃತ್ಯುಪಾಶವನ್ನೇ ಕಿತ್ತೆಸೆದು ಅಮೃತ ಪುತ್ರನಾದ ಮಾರ್ಕಾಂಡೇಯ ಬೇಡರ ವಂಶಸ್ಥ. ಪತಿವ್ರತಾಶಿರೋಮಣಿ ಎನಿಸಿದ ಮಂಡೋದರಿಯಾದರೋ ಮಂಡೂಕ ವಂಶಸ್ಥಳು. ಸಮುದ್ರವನ್ನೇ ಆಪೋಶನ ಮಾಡಿದ. ಸಾಹಸಿ ಮಹರ್ಷಿ ಅಗಸ್ತ್ಯ ದಕ್ಷನಾದ ದೂರ್ವಾಸ, ಸಕಲ ಸಂಪನ್ನನಾದ ಕಶ್ಯಪ, ಧೀರೋದಾತ್ತನಾದ ಕೌಂಡಿಣ್ಯ, ಇವರಾರೂ ಉತ್ತಮ ಕುಲದಲ್ಲಿ ಜನಿಸಿದವರೇ ಅಲ್ಲ. ಚಮ್ಮಾರ, ಕಮ್ಮಾರ, ಮುಂತಾದ ಕೀಳೆಂದು ಪರಿಗಣಿಸಲಾದ ಕುಲದಲ್ಲಿ ಹುಟ್ಟಿದವರು. ಆದಾಗ್ಯೂ ಅವರುಗಳು ತಮ್ಮ ಗುಣ–ಶಿವಭಕ್ತಿ ಶೀಲ ಸಂಪನ್ನತೆಯಿಂದ ಸರ್ವಸಾಮಾನ್ಯ ಶಿರೋಮಣಿಗಳಾದರು. ಇವರೆಲ್ಲರಿಗೂ ಗೌರವ, ಪೂಜ್ಯತೆಗಳು ದೊರೆತದ್ದು ಕುಲ ಜಾತಿ ಭ್ರಾಂತಿಯ ಭ್ರಮೆಗಳಿಂದಲ್ಲ. ಅವರಲ್ಲಿದ್ದ ತತ್ವ-ವಿಚಾರದಿಂದ. ರೂಢ ಮೂಲವಾದ ಸದಾಚಾರಗಳಿಂದ. ಇದನ್ನು ಮನಗಂಡ ಭಕ್ತಿ ಭಂಡಾರಿ ಬಸವಣ್ಣನವರು 'ಕುಲವನರಸದಿರಿಂಭೋ ಎಂದು ಘೋಷಿಸಿದರು. ಕೇವಲ ಹುಟ್ಟಿನಿಂದಲೇ ಯಾರೂ ಉತ್ತಮ ಅಧಮರೆನಿಸುವುದಿಲ್ಲ. ಉತ್ತಮ ಕುಲದಲ್ಲಿ ಹುಟ್ಟಿದ ಮಾತ್ರಕ್ಕೆ ಉತ್ತಮ ಕಾರ್ಯವನ್ನು ಸಾಧಿಸಿಲ್ಲ. ಉತ್ತಮ ಕುಲದವರೆನಿಸಿಕೊಳ್ಳಲು ಕುಲ-ಗೋತ್ರಗಳು ಮುಖ್ಯವಲ್ಲ. ವ್ಯಕ್ತಿಯಲ್ಲಿರುವ ದೈವಭಕ್ತಿ ಮತ್ತು ಲೋಕ ಕಾರುಣ್ಯ ಮುಖ್ಯ. ಹುಟ್ಟಿನಿಂದ ಶ್ವಪಚನಾದರೆ ತಾನೇ ಏನು? ಅವನನ್ನು ಕುಲಶ್ರೇಷ್ಠನನ್ನಾಗಿ ಮಾಡುವ ಶಕ್ತಿ ದೈವಭಕ್ತಿ ಮತ್ತು ಲೋಕಕಾರುಣ್ಯದಲ್ಲಿದೆ ಎಂಬುದನ್ನು ಉತ್ತಮ ವರ್ಗದವರೆನಿಸಿ ಕರೆಸಿಕೊಳ್ಳುವರಾರೂ ಮರೆಯುವಂತಿಲ್ಲ. ●

---

### ತಪಸದ ತಾಣ

ವೀರೇಶ್, ವಿಜಯಪುರ, ಬೆಂಗಳೂರು-ಜಿಲ್ಲೆ.

ಶಿವಯೋಗಿ ಪುಂಗವರು
ತಪಗೈದ ತಾಣ
ಹಗಲಿರುಳು ಶಿವ ಚಿಂತೆ
ಮಾತೆಲ್ಲ ಮೌನ
ಗುರುದೇವ ಪದಕಮಲ
ಕೆರಗುವ ಭಕ್ತಜನ
ಭೃಂಗಗಳ ಮಕರಂದ
ಝೇಂಕಾರ ಗಾನ

ಕ್ಷೇತ್ರವಿದು ಕೈಲಾಸ
ಅಮರ ಗಣ ಸಂತಾನ
ನೋಟ ಕೂಟದ ಮಾಟ
ಅಮೃತದ ಪಾನ
ಕಾಯಕವೆ ಕೈಲಾಸ
ಶಿವಕುಮಾರರ ಧ್ಯಾನ
ವೀರೇಶ ಧರೆಗಿಳಿದು ಬಂದ
ಇದು ಸುರರ ಸೋಪಾನ"



# ಮುಕ್ತಾಯಕ್ಕ–ಸತ್ಯಕ್ಕ

## ಶಿವಶರಣೆಯರ ತಾತ್ವಿಕ ಚಿಂತನೆ

ಪ್ರೊ. ಎಸ್. ಎಸ್, ಭೂಸರೆಡ್ಡಿ' ಧಾರವಾಡ-4

ಬಸವ ಸಮಕಾಲೀನ ಶಿವಶರಣೆಯರು ಅತ್ಯಂತ ಪ್ರತಿಭಾವಂತರು, ಪ್ರಜ್ಞಾವಂತರು, ತಾತ್ತ್ವಿಕ ಚಿಂತಕರು. ಮಹಾಶರಣೆ ಮುಕ್ತಾಯಿ ಸತ್ಯಕ್ಕ ಉಭಯತರ ನಡುವೆ ನಡೆದ ಸಂವಾದ ಕುತೂಹಲಕಾರಿಯಾಗಿದೆ. ತಾತ್ತ್ವಿಕ ವಿಚಾರಗಳನ್ನು ಸೊಗಸಾಗಿ ವಿವೇಚಿಸಿದ್ದಾರೆ, ವಿಶ್ಲೇಷಿಸಿದ್ದಾರೆ. ವಚನ ಸಾಹಿತ್ಯ ಸಾಗರವನ್ನು ಕಡೆದಾಗ ಹೊರಟ ನವನೀತವಿದು. ಇಲ್ಲಿ ಧರ್ಮವಿದೆ, ಸಾಹಿತ್ಯವಿದೆ, ತತ್ತ್ವವಿದೆ. ಸಮಗ್ರ ಜನಾಂಗಕ್ಕೆ ಸಂದೇಶವಿದೆ. ಅಂಥ ಸಂವಾದ ಒಂದನ್ನು ವಚನಗಳ ಮುಖಾಂತರ ಚರ್ಚಿಸಲಾಗಿದೆ. ಸತ್ಯಕ್ಕ ಶರಣರ ಮನೆಯಂಗಳದ ಕಸ ಹೊಡೆಯುವ ಕಾಯಕ ಜೀವಿ, ಅತ್ಯಂತ ಕೆಳಸ್ಥರದಿಂದ ಅರಳಿಬಂದ ಅನರ್ಘ್ಯರತ್ನ. ಇಪ್ಪತ್ತೇಳು ವಚನಗಳು ಲಿಂಗಾಂಗ ಸಾಮರಸ್ಯ, ಏಕದೇವೋಪಾಸನೆ, ನೀತಿನಿರೂಪಣೆ, ದೇವರ ಅಸ್ತಿತ್ವವನ್ನು ಕುರಿತಾಗಿ ಮನೋಹರವಾಗಿ ಸರಳವಾಗಿ ಸುಲಭವಾಗಿ ವಚನಗಳ ಮೂಲಕ ಚಿತ್ತರಿಸಿದ್ದಾಳೆ. ಮುಕ್ತಾಯಿ ಮಹಾಪ್ರಜ್ಞಾವಂತೆ, ಪ್ರತಿಭಾವಂತೆ, ಅಜಗಣ್ಣನ ಪ್ರೀತಿಯ ತಂಗಿ. ಆಕೆಯ ವಚನಗಳಲ್ಲಿ ಅಜಗಣ್ಣನ ಅಗಲಿದಾಗ ಅಳಿಲನ ವಚನಗಳು ಹೃದಯಂಗಮವಾಗಿವೆ. ಅನುಭವ ಮಂಟಪದ ಅಧ್ಯಕ್ಷ ಮಹಾನುಭಾವಿ ಅಲ್ಲಮಪ್ರಭುದೇವರೊಡನೆ ತರ್ಕಬದ್ಧವಾಗಿ ವಿವೇಚಿಸಿದ್ದಾಳೆ, ವಾದ ಮಾಡಿದ್ದಾಳೆ. ಈ ರಸಮಯ ಸನ್ನಿವೇಶವು ಶೂನ್ಯ ಸಂಪಾದನೆಯಲ್ಲಿ ನಿರೂಪಿತಗೊಂಡಿದೆ. ಅಜಗಣ್ಣನ ಅಗಲುವಿಕೆ ಅಸಹನೀಯವಾಗಿದೆ. ಗುರುವನ್ನು ಕಳೆದುಕೊಂಡು ಅನಾಥಳಾಗಿದ್ದಾಳೆ. ಆಗ ಮುಕ್ತಾಯಿ ಸಹಜವಾಗಿ ದುಃಖಿಸುತ್ತಾಳೆ, ಪ್ರಭುದೇವರು ಸಮಾಧಾನ ಪಡಿಸುತ್ತಾರೆ. ಸತ್ಯಕ್ಕ ಸತ್ಯವನ್ನೇ ಪ್ರತಿಪಾದಿಸುತ್ತಾಳೆ. ಶರಣ ತತ್ತ್ವವನ್ನು ಎತ್ತಿ ಹಿಡಿದಿದ್ದಾಳೆ.

ಭಕ್ತರಿಗೆ ಅಕ್ಕೆ ಶೋಕ ದುಃಖವುಂಟೆ ಅಯ್ಯಾ ?
ಅತ್ತು ಕರೆವ ನೋವ ಹಾಡಿ ಕಳೆಯಲೇಕಯ್ಯಾ ?
ಈ ಮುಕ್ತಾಯಕ್ಕಗಳ ಕಕ್ಕುಲತೆಯ
ಶಂಭುಜಕ್ಕೇಶ್ವರನ ಶರಣರೊಪ್ಪರಯ್ಯಾ

ಮುಕ್ತಾಯಕ್ಕನ ಅಣ್ಣನ ಕಕ್ಕುಲತೆಯನ್ನೇ ಪ್ರಶ್ನಿಸಿದ್ದಾಳೆ. ಶರಣರು ಸಮನ್ವಯಿಗಳು ಸುಖ ದುಃಖಗಳ ಸಮನ್ವಯಿಗಳು. ಅವರಿಗೆ ದುಃಖವು ಅಷ್ಟೇ ಸುಖವು ಅಷ್ಟೆ. ಶರಣರು ಶಿವನಲ್ಲಿ ಒಂದಾದ ಬಳಿಕ ದೇವ ಸ್ವರೂಪರೇ ಆದ ಬಳಿಕ ಅದಕ್ಕೆ ಅಳುವುದೇಕೆ ? ದುಃಖ ಪಡುವುದೇಕೆ? ಮುಕ್ತಾಯಿ ಮಹಾಜ್ಞಾನಿ. ಯಾಕಿಷ್ಟು ದುಃಖ ಪಡುವುದು, ಅಳುವುದು ಶರಣ ಧರ್ಮದಲ್ಲಿ ಇದಕ್ಕೆ ಅವಕಾಶವಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಾಳೆ.

ಕಾರಣದಿಂದ ಕಾಯುವ ಬಿಟ್ಟಡೆ ಶೋಕವೇಕೆ ?
ಶಿವಭಕ್ತರು ಶಿವಸ್ವರೂಪು
ಎನ್ನವರು ಅನ್ಯರೆಂದುಂಟೆ ?
ಇದುಗನ್ನದ ಮಾತೆಂದೆ ಶಂಭುಜಕ್ಕೇಶ್ವರಾ.

ಸಮಾನತೆಯ ಧ್ವಜವನ್ನು ಎತ್ತಿಹಿಡಿದ ಸತ್ಯಕ್ಕ ಶಿವಭಕ್ತರು ಶಿವನ ಸಮಾನರು, ಅವರಲ್ಲಿ ತಾರತಮ್ಯಭಾವವೇಕೆ, ಎನ್ನವರು ಅನ್ಯರೆಂದು ತಿಳಿದುಕೊಳ್ಳುವುದು ವಿಹಿತವಲ್ಲವೆಂದು ಸತ್ಯಕ್ಕ ಇಲ್ಲಿ ಪ್ರತಿಪಾದಿಸಿರುವರು ಆಕೆಯ ಸಮಾಜ ಕಳಕಳಿಯನ್ನೂ, ತತ್ತ್ವನಿಷ್ಠೆಯನ್ನೂ ಮೌಲಿಕ ವಿಚಾರವನ್ನು ತಿಳಿಯಪಡಿಸುತ್ತದೆ. ಬಸವಣ್ಣನವರ ಅನುಭವಮಂಟಪದ ಪರಿಸರದಲ್ಲಿ ಎಂಥಹದಿವ್ಯ ರತ್ನಗಳು ಬೆಳಗಿದರೆಂಬುದಕ್ಕೆ ಸತ್ಯಕ್ಕ ಮುಕ್ತಾಯಕ್ಕಗಳೇ ನಿದರ್ಶನ. ಅಕ್ಕಮಹಾದೇವಿ, ಅಕ್ಕನಾಗಮ್ಮನವರು ಮಹಾನುಭಾವಿಗಳಂತೆ ಇವರು ಕೂಡ ದಿವ್ಯಾನುಭವದ ಅಮೃತವನ್ನೇ ವಚನಗಳ ಮೂಲಕ ತೋರ್ಪಡಿಸಿದ್ದಾರೆ. ಮುಕ್ತಾಯಕ್ಕ ಸತ್ಯಕ್ಕನಿಗೆ ತಾಯಿ ಎಂದು ಸಂಭೋಧಿಸಿ ಸಮಾಧಾನಪಡಿಸಿದ ಸಾಂತ್ವನ ಮಾಡಿದ ವಚನವು ಮಾರ್ಮಿಕವಾಗಿದೆ. ಶರಣರು, ಲೌಕಿಕ, ಅಲೌಕಿಕವೆಂದು ತಿಳಿಯುವುರಲ್ಲಿ.

ಧ್ಯಾನಿಸಿದಡೆ ಶೋಕಿಸಿದರೆಂಬೆರತಿ ಅವ್ವಾ
ಅಜಗಣ್ಣ ತಂದೆಯನಗಲಿ ನಾನೆಂತು ಸೈರಿಸುವೆ ನೆಲೆ ಸತ್ಯಕ್ಕತಾಯಿ!

ಅಜಗಣ್ಣ ನನಗೆ ಅಣ್ಣನೂ ಅಹುದು, ಗುರುವು ಅಹುದು. ಇಂಥವನು ಅಗಲಿದಾಗ ಅವನನ್ನು ಸ್ಮರಿಸಿಕೊಂಡರೆ ತಪ್ಪೇನಿದೆ ಎಂದು ಹೇಳುವ ಮಾತುಗಳು ಮಾನನೀಯವಾಗಿದೆ, ಲೌಕಿಕ ಪ್ರಜ್ಞೆಯನ್ನು ತೋರಿಸುತ್ತದೆ.



# ಒಂದು ಹಳ್ಳಿಯ ಕತೆ

ಬಿ. ಸುಬ್ಬಾರಾಯ ಅಡಿಗ, ನಿವೃತ್ತ ಶಿಕ್ಷಕರು, ಸಂಡೂರು, ಬಳ್ಳಾರಿ ಜಿಲ್ಲೆ-5831139.

ರಾಜಧಾನಿಯ ದಕ್ಷಿಣಕ್ಕಿರುವ ನಂಗಲದೇವತಹಳ್ಳಿ ಭಾರತದ ಸಾಮಾಜಿಕ ಹಾಗೂ ಆರ್ಥಿಕ ಕ್ರಾಂತಿಯ ಪ್ರತೀಕವೆನಿಸಿದೆ. ಇಲ್ಲಿಯ ಜನಸಂಖ್ಯೆ ಸುಮಾರು ಆರು ಸಾವಿರ. ಅವರಲ್ಲಿ ಜಾಟ್ ಜಾತಿಯ 400 ಪರಿವಾರಗಳ ಜನರು ತಮ್ಮ ಪರಂಪರಾಗತ ಕಸುಬಾದ ಬೇಸಾಯವನ್ನು ಪೂರ್ತಿಯಾಗಿ ಬಿಟ್ಟುಬಿಟ್ಟದ್ದಾರೆ.

ದಿಲ್ಲಿ ಆಡಳಿತವು ಅವರ ಜಮೀನನ್ನು ವಶಪಡಿಸಿಕೊಂಡಿದೆ. ಹೊಲವೇ ಇರದ ಮೇಲೆ ಬೇಸಾಯಕ್ಕೆ ಎಡೆಯೆಲ್ಲಿ ? ಆದರೆ ಕಳೆದುಕೊಂಡ ಜಮೀನಿಗೆ ಪರಿಹಾರ ರೂಪದಲ್ಲಿ ಕೋಟ್ಯಾಂತರ ರೂಪಾಯಿ ಸಿಕ್ಕಿದುದರಿಂದ ಅವರ ಜೀವನ ಕ್ರಮವೇ ಬದಲಾಗಿಬಿಟ್ಟಿತು.

ಭಿಕ್ಷುಕನಿಗೆ ಒಮ್ಮೆಲೇ ಲಾಟರಿಯಲ್ಲಿ ಲಕ್ಷಾಂತರ ರೂಪಾಯಿ ಬಂದರೆ ಅವನ ಜೀವನ ಮಟ್ಟವೇ ಬದಲಾಗುವಂತೆ ಈ ಹಳ್ಳಿಯ ರೈತರ ಸ್ಥಿತಿಯೂ ಆಯಿತು. ಹಣ ಕೈಸೇರಿದಾಗ ವಿವೇಕಿಗಳ ಬುದ್ಧಿಯೂ ಹಾಳಾಗುತ್ತದೆ. ಹಿಂದು ಮುಂದಿನ ಯೋಚನೆಯಿಲ್ಲದೆ ಮನ ಬಂದಂತೆ ಹಣ ಖರ್ಚು ಮಾಡುತ್ತಾರೆ. ವಿವೇಕಿಗಳೇ ಕಾಲು ಜಾರುತ್ತಿರುವಾಗ ನಂಗಲದೇವತದ ಸರಳ ಹಳ್ಳಿಗರ ಪಾಡೇನು ? ಈ ಹಳ್ಳಿಯ ಜಮೀನು ಮಾರಿ ಹೋಗುತ್ತಲೇ ಮಾರಿಯೇ ಈ ಹಳ್ಳಿಯನ್ನು ಹೊಕ್ಕಂತಾಯಿತು.

ನಂಗಲದೇವತದ ಒಂದೆಡೆ ಕಣ್ಣು ಕೋರೈಸುವ ವಿಶಾಲ ಪಂಚತಾರಾ ಹೋಟೆಲ್ "ಸೆಂಟೂರ್" ಅಭಿಮಾನದಿಂದ ತಲೆಯೆತ್ತಿ ನಿಂತಿದೆ. ಇನ್ನೊಂದೆಡೆ ಅದಕ್ಕಿಂತಲೂ ಹೆಚ್ಚು ಭವ್ಯವೂ ಸುಂದರವೂ ಆದ ಇಂದಿರಾಗಾಂಧಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣವಿದೆ. ಇಕ್ಕೆಲದಲ್ಲಿರುವ ಈ ವೈಭವ ಹಾಗೂ ವಿಲಾಸದ ಪ್ರಭಾವ ನಂಗಲದೇವತದಲ್ಲೂ ಸ್ಪಷ್ಟವಾಗಿ ತೋರುತ್ತಿದೆ. ಮೇಲ್ನೋಟಕ್ಕೆ ಇಲ್ಲಿ ಯಾವುದೇ ಬದಲಾವಣೆ ಕಾಣಿಸುವುದಿಲ್ಲ. ಅದೇ ಹಿಂದಿನ ಹಳೆಯ ಮನೆಗಳು ಹಾಗೂ ಏರು ತಗ್ಗಾದ ಓಣಿಗಳು.... ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದರೆ ಬದಲಾವಣೆ ಸ್ಪಷ್ಟವಾಗುವುದು.

ಹಳ್ಳಿಯೆಂದಾಕ್ಷಣ ನಮ್ಮ ಕಣ್ಣೆದುರು ದನಕರುಗಳು, ಬೇಸಾಯದ ಉಪಕರಣಗಳು.... ನಸುಕಿನಲ್ಲೇ ಹೊಲದಲ್ಲಿ ದುಡಿಯಲು ಹೋಗುವ ರೈತರು.... ಇವೆಲ್ಲ ದೃಶ್ಯಗಳು ಬಂದು ನಿಲ್ಲುತ್ತವೆ. ಆದರೆ ನಂಗಲದೇವತ ಹಳ್ಳಿಯನ್ನು ಪೂರ್ತಿ ಸುತ್ತಾಡಿ ಬಂದರೂ ನಿಮಗೆ ಇದಾವುದೂ ಕಾಣಿಸುವುದಿಲ್ಲ. ಮನೆಯ ಹೊರಗೆ ಟ್ರಾಕ್ಟರ್

ಬದಲು ಮಾರುತಿಕಾರು ಕಾಣಿಸುತ್ತದೆ. ಮನೆಯೊಳಗೆ ಬೇಸಾಯದ ಉಪಕರಣಗಳ ಬದಲು ಬಣ್ಣದ ಟೀ.ವಿ ವೀಡಿಯೋ, ಟೂ ಇನ್ ಒನ್ ಕೂಲರ್, ಸೋಫಾ, ಡೈನಿಂಗ್ ಟೇಬಲ್ ಹಾಗೂ ಇತರ ವಿಲಾಸಮಯ ಸಾಮಗ್ರಿಗಳು ಕಂಗೊಳಿಸುತ್ತಿವೆ. ಹಳ್ಳಿಯಲ್ಲಿ ಮಕ್ಕಳು ಎಲ್ಲೂ ಕಾಣಿಸಲಿಲ್ಲ. ಹೆಚ್ಚಿನ ಮಕ್ಕಳು ದಿಲ್ಲಿಯ ದುಬಾರಿ ಶಾಲೆಗಳಲ್ಲಿ ಕಲಿಯುತ್ತಿದ್ದಾರೆಂದು ತಿಳಿದು ಬಂತು.

ಪ್ರತಿಯೊಂದು ಪರಿವಾರಕ್ಕೂ ಲಕ್ಷಾಂತರ ರೂಪಾಯಿ ಸಿಕ್ಕಿದುದರಿಂದ ಆ ಹಣವನ್ನು ಬ್ಯಾಂಕಿನಲ್ಲಿಟ್ಟು ಅದರ ಬಡ್ಡಿಯಿಂದ ಈ ರೈತರು ಜೀವನ ಸಾಗಿಸುತ್ತಿದ್ದಾರೆ. ಬೇಸಾಯವೊಂದನ್ನು ಬಿಟ್ಟು ಬೇರಾವ ಉದ್ಯೋಗವೂ ಇವರಿಗೆ ತಿಳಿಯದು. ಹೀಗಾಗಿ ವೇಳೆ ಕಳೆಯಲು ಇಸ್ಪೀಟಾಡುತ್ತಾರೆ.

ಕೆಲವರ್ಷಗಳ ಹಿಂದೆ ಕಾಲ್ನಡಿಗೆಯಿಂದ ಓಣಿಯಲ್ಲಿ ಸಾದಾ ಬಟ್ಟೆ ಧರಿಸಿ ತಿರುಗಾಡುತ್ತಿದ್ದ ತರುಣರೇ ಇಂದು ಟೈಟ್ ಜೀನ್ ಧರಿಸಿ ದುಬಾರಿ ಬೆಲೆಯ ಮೋಟರ್ ಸೈಕಲ್‌ಗಳಲ್ಲಿ ವೇಗವಾಗಿ ಸಾಗುತ್ತಿದ್ದಾರೆ. ಮಜಾ ಮಾಡುತ್ತ ಇತರರ ಮೇಲೆ ತಮ್ಮ ಪ್ರಭಾವ ಬೀರುವುದೇ ಈ ತರುಣರ ಏಕ ಮಾತ್ರ ಉದ್ದೇಶವೆನಿಸಿದೆ.

ಕಳೆದ ಕೆಲವರ್ಷಗಳಿಂದ ಯಾವುದೇ ಉದ್ಯೋಗವಿಲ್ಲದೆ ಹೆಚ್ಚಿನಹಳ್ಳಿಗರಿಗೆ ಆರಾಮದ ಬದುಕು ಅಭ್ಯಾಸವಾಗಿದೆ. ಹಿರಿಯರು ಕಾಡುಹರಟೆಯಲ್ಲಿ ವೇಳೆ ಕಳೆಯುತ್ತಿದ್ದರೆ, ತರುಣರು ಭೋಗವಿಲಾಸದಲ್ಲಿ ಮುಳುಗಿರುತ್ತಾರೆ. ಸಂಜೆಯಾಗುತ್ತಲೇ ಅವರು ಮದ್ಯಸೇವನೆಗೆ ತೊಡಗುತ್ತಾರೆ. ಬೇರೆ ಬೇರೆ ಚಟಗಳೂ ಇವರಿಗೆ ಅಂಟಿಕೊಂಡಿವೆ.

ತರುಣರ ಈ ದುಃಸ್ಥಿತಿಯನ್ನು ಕಂಡು ಹಿರಿಯರು ಹೌಹಾರುತ್ತಾರೆ. ಅವರಿಗೆ ಈ ಪತನದ ಪರಿಣಾಮ ಚೆನ್ನಾಗಿ ತಿಳಿದಿದೆ. ಆದರೆ ಹಿರಿಯರ ಮಾತಿಗೆ ಯುವಕರು ಕಿವಿಗೊಡುವುದಿಲ್ಲ. ಈಗಿನ ತಾತ್ಕಾಲಿಕ ಆನಂದವೇ ಅವರಿಗೆ ಬೇಕಾಗಿದೆ.

ಜಮೀನು ಕಳೆದುಕೊಂಡ ರೈತರಿಗಷ್ಟೇ ಲಕ್ಷಾಂತರ ರೂಪಾಯಿ ಹಣ ದೊರೆತಿದ್ದರೂ ಬದಲಾದ ವಾತಾವರಣ ಇಡೀ ಹಳ್ಳಿಯ ಮೇಲೆಯೇ ತನ್ನ ಪ್ರಭಾವ ಬೀರಿದೆ. ಜಾಟರನ್ನು ಅನುಕರಿಸುತ್ತ ಹಳ್ಳಿಯ ಹರಿಜನರೂ ಶರಾಬು ಕುಡಿದು ರಂಪಾಟ ಮಾಡುತ್ತಿದ್ದಾರೆ. ಹಿಂದೆ ಇವರೇ ಜಾಟರ ಹೊಲಗಳಲ್ಲಿ ಬೆವರು ಹರಿಸಿ ದುಡಿಯುತಿದ್ದರು. ಈಗ ಜಾಟರ ಕಾರುಗಳ ಚಾಲಕರಾಗಿ ಸೇರಿದ್ದಾರೆ. ಸಹವಾಸದೋಷದಿಂದಾಗಿ ಇವರೂ ಸೆರೆ ಕುಡಿದು ತೂರಾಡುತ್ತಾ ನಡೆಯುತ್ತಾರೆ.



ಹರಕೇಶ ಲಕ್ಷ್ಮಣನ ಮಗ. ವಿವಾಹಿತಯುವಕ. ಸ್ಮೇಕ್ ಚಟ ಅಂಟಿದ ಬಳಿಕ ತನ್ನ ಬಳಿಯಿದ್ದ ಎಲ್ಲ ಹಣವನ್ನು ಕಳೆದುಕೊಂಡ. ಕೈ ಬರಿದಾದಾಗ ಬೇಕಾದ ಉಪಾಯವೂ ಕಾಣದೆ ಆತ್ಮಹತ್ಯೆ ಮಾಡಿಕೊಂಡ

ಸತಪಾಲ್ ಪೋಲೀಸ್ ಅಧಿಕಾರಿ ಅವಿವಾಹಿತ ಪುತ್ರ. ಅಮಲಿನಿಂದಾಗಿ ಮನೆ-ಯಲ್ಲಿ ಆಗಾಗ ಜಗಳಾಡುತ್ತಿದ್ದ. ಒಂದು ದಿನ ಆತ ಅಧಿಕಪ್ರಮಾಣದಲ್ಲಿ ಸ್ಮೇಕ್ ನುಂಗಿ ಅಸುನೀಗಿದ.

ಲಾಲಸಿಂಹನ ಮಗನೂ ಮಾದಕವಸ್ತು ಸೇವಿಸುತ್ತಿದ್ದ. ಒಮ್ಮೆ ಅದನ್ನುಕೊಳ್ಳಲು ಹಣ ಇರದಾದಾಗ ಮೈಗೆ ಎಣ್ಣೆ ಹೊಯ್ದುಕೊಂಡು ಉರಿ ಹಚ್ಚಿಕೊಂಡ. ಅವನಿಗೆ ಒಂದು ವರ್ಷದ ಒಬ್ಬ ಹುಡುಗ ಮಾತ್ರ ಇದ್ದ.

ಇಂಥ ಒಂದೆರಡಲ್ಲ – ಹಲವಾರು ಘಟನೆಗಳನ್ನು ಉದಾಹರಿಸಬಹುದು. ದುಶ್ಚಟಗಳ ಜತೆಗೆ ಅಪರಾಧಗಳೂ ಇಲ್ಲಿ ಬಹಳಷ್ಟು ಹೆಚ್ಚಿವೆ.

ಸ್ತ್ರೀಯರ ಮೇಲೆ ಬಲಾತ್ಕಾರ ಅತ್ಯಾಚಾರ ಮೊದಲಾದವು ಈಗ ಸಾಮಾನ್ಯವಾಗಿವೆ. ಈ ಹಿಂದೆ ಶಾಂತ ಹಳ್ಳಿಯಾಗಿದ್ದ ನಂಗಲ ದೇವತ್ ಈಗ ಅಶಾಂತಿಯ ನೆಲೆವೀಡಾಗಿದೆ. ಇವರ ಈ ದುಃಸ್ಥಿತಿಗೆ ಸರಕಾರ ಕೂಡ ಹೊಣೆಯೆನ್ನಬಹುದು. ಲಕ್ಷಾಂತರ ರೂಪಾಯಿ ಹಣ ಕೊಡುವ ಬದಲು ಬೇರೆ ಇವರಿಗೆ ಹೊಲ ಮನೆ ಕೊಡಿಸಿದರೆ ಇವರು ಇಷ್ಟೊಂದು ಹಾಳಾಗುತ್ತಿರಲಿಲ್ಲ. ಆದರೆ ಆಡಳಿತದ ಅಧಿಕಾರಿಗಳು ಪರಿಹಾರದ ಹಣ ಕೊಡುತ್ತಲೇ ನಮ್ಮ ಹೊಣೆ ಮುಗಿಯುತ್ತದೆ ಎಂದು ಖಂಡತುಂಡವಾಗಿ ಹೇಳುತ್ತಾರೆ. ಸಮಾಜದ ದುರವಸ್ಥೆಯ ಬಗ್ಗೆ ಯೋಚಿಸಿ ಅವರೇನೂ ತಲೆಕೆಡಿಸಿಕೊಳ್ಳುವುದಿಲ್ಲ.

ಇದೊಂದು ಶಾಂತ ಹಳ್ಳಿಯ ಪತನದ ಕಥೆ. ಸಮಾಜ ಶಾಸ್ತ್ರಗಳು ಇದರಿಂದ ಪಾಠ ಕಲಿತು ಮುಂದೆ ಇಂಥ ದುಃಸ್ಥಿತಿ ಒದಗದಂತೆ ನೋಡಿಕೊಳ್ಳುವರೆ? ●

(ಹಿಂದಿಯಿಂದ)

## ವಚನ

ಉಪಚಾರದ ಗುರುವಿಂಗೆ ಉಪಚಾರದ ಶಿಷ್ಯ ; ಉಪಚಾರದ ಲಿಂಗ, ಉಪಚಾರದ ಜಂಗಮ, ಉಪಚಾರದ ಪ್ರಸಾದವ ಕೊಂಡು, ಗುರುವಿಂಗೆ ಭವದ ಲೆಂಕನಾಗಿ, ಅಂಧಕನ ಕೈಯ ಅಂಧಕ ಹಿಡಿದಂತೆ ಇವರಿಬ್ಬರು ಹೊಲಬುಗೆಟ್ಟರು ಕಾಣಾ ಗೊಹೇಶ್ವರಾ.

—ಅಲ್ಲಮಪ್ರಭು.

## ಆರೋಗ್ಯ ಆಶಿಸುವ ಜೀವ

ಭಾವಜ್ಞ ಜಮಖಂಡಿ, ಅಧ್ಯಕ್ಷರು, ಕ. ಸಾ. ಪ., ಜಮುಖಂಡಿ, ವಿಜಾಪುರ ಜಿಲ್ಲೆ.

ಜೀವ ಬಯಸುವುದೆಲ್ಲ
ಭಾವ ಬಯಸಲಿ
ಭಾವ ಬಯಸುವುದೆಲ್ಲ
ವಿವೇಕ ವಿವೇಚಿಸಲಿ.

ಜೀವ ಬಯಸುವುದೇನು
ಭಾವ ಬಯಸುವುದೇನು
ಪಂಚಭೂತದ ಕಾಯ
ಸ್ವಚ್ಛಂದವಾಗಿರಲಿ.

ರೋಗ ರುಜಿನಗಳಾವರಿಸಿ
ಕಾಯ ಮಲಿನವಾದರೆ
ನೋವು ಗಾಯಗಳಾಗಿ
ಹೇಸಿಕೊಳ್ಳುವುದು ಜೀವ
ಬೇಸತ್ತು ಕೊನೆಗೊಮ್ಮೆ
ತ್ಯಜಿಸುವುದು ಕಾಯ.
ಶವವಾಗುವುದಾಗ
ಜೀವವಿಲ್ಲದಕಾಯ.

ಕಾಯ ಆರೋಗ್ಯ
ಆಶಿಸುವ ಜೀವ
ಲೋಕವೈದ್ಯ.

ಜಾಯಮಾನದ ತುಂಬ
ಜೀವವಾಸಿಸಲಿ
ಜೀವ ಬಯಸಿದ ಹಾಗೆ
ಕಾಯ ಕಾಯುವುದಾದರೆ
ಜೀವ-ದೇಹದ ಸ್ನೇಹ
ಯುಗ ಯುಗಾಂತರ.

## ನಿಜವಾದ ಮಾನವತೆ

ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮಚ್ಚಿನ- 574295 ದ.ಕ.

ಹಜರತ್ ಉಮರರು ಬಾಗದಾದಿನ ಖಲೀಫರಾದರೂ ಸಾಮಾನ್ಯ ಉಡುಪನ್ನು ಧರಿಸಿ, ನೆಲದ ಮೇಲೆ ಕುಳಿತು ಜನರಿಗೆ ಧರ್ಮ ಬೋಧೆ ಮಾಡುತ್ತಿದ್ದರು. ಇದನ್ನು ಕಂಡು ವಜೀರನೊಬ್ಬ ತಲೆದಿಂಬನ್ನು ಅವರಿಗೆ ತಂದು ಕೊಟ್ಟು, ಖಾವಂದರು ಇದರ ಮೇಲೆ ಒರಗಿಕೊಂಡರೆ ಹೆಚ್ಚು ಆಯಾಸವಾಗುವುದಿಲ್ಲ ಎಂದು ಸಲಹೆ ನೀಡಿದನಂತೆ. ಖಲೀಫರು ಅಸಹನೆಯಿಂದ, "ಜನರಿಗೆ ಬದುಕುವ ಬಗೆಯನ್ನು ತಿಳಿಸುವಾಗ ಇಲ್ಲಿ ಒರಗಿಕೊಳ್ಳಲು ನೀನೇನೋ ದಿಂಬನ್ನು ತಂದುಕೊಡುತ್ತಿ ಸರಿ. ಆದರೆ ಮುಂದೆ ಭಗವಂತನ ಎದುರು ವಿಚಾರಣೆಗೆ ನಿಲ್ಲುವಾಗ ಈ ದಿಂಬನ್ನು ನಾನು ಕುತ್ತಿಗೆಗೆ ಕಟ್ಟಿಕೊಂಡಿರಬೇಕಾಗುತ್ತದೆಂಬುದನ್ನು ನೀನು ಅರಿತಿಲ್ಲವೆ?" ಎಂದು ಕೇಳಿ ಆ ದಿಂಬನ್ನು ನಿರಾಕರಿಸಿದರಂತೆ.

ಜನ ಸೇವೆಯ ಮುಖವಾಡ ಧರಿಸಿ, ಅಧಿಕಾರದ ಗದ್ದುಗೆಯನ್ನೇರಿ ಶ್ರೀ ಸಾಮಾನ್ಯನಿಗೆ ಉಡಿದಾರಕ್ಕೂ ಗತಿಯಿಲ್ಲದಿರುವಾಗಲೂ ತನ್ನ ಸುಖದ ಸುಗ್ಗಿಗಾಗಿ ಸರಕಾರದ ಖಜಾನೆಯನ್ನು ಸೂರೆ ಮಾಡುತ್ತಿರುವವರು ಇಂತಹ ಕತೆಯನ್ನು ಓದಿರಲಾರರು. ತನಗೆ ಅಗತ್ಯವಲ್ಲದ, ತನ್ನದಲ್ಲದ ಸ್ವತ್ತುಗಳನ್ನು ಕಬಳಿಸಿ ಸ್ವಾರ್ಥ ಸಾಧಕರಾಗಿರುವವರು ಮುಂದೊಂದು ದಿನ ಸತ್ತು ದೇವರ ಮುಂದೆ ವಿಚಾರಣೆಗಾಗಿ ನಿಲ್ಲುವ ದಿನಗಳನ್ನು ಎಣಿಸಿದರೆ ಪಾಪ ಆಚರಣೆಗೆ ಮನಸ್ಸು ಮಾಡಲಿಕ್ಕಿಲ್ಲ. ಅದರ ಬಗೆಗೆ ಯೋಚಿಸಲೂ ಬಿಡುವಿರಲಿಕ್ಕಿಲ್ಲ.

"ಕೆಲವೊಮ್ಮೆ ನಾನು ಮುಂಗೋಪಗೊಂಡು ಪಾಪ ಕಾರ್ಯಗಳನ್ನು ಮಾಡುತ್ತಿದ್ದೇನೆ. ಇದನ್ನು ತ್ಯಜಿಸುವ ಬಗೆ ಹೇಗೆ?" ಎಂದು ಒಬ್ಬ ಗೃಹಸ್ಥನು ನಂತರದಲ್ಲಿ ವಿಚಾರಿಸಿದ. ಅದಕ್ಕೆ ಸಂತರು, ಅಯ್ಯಾ, ನಿನ್ನ ಪಾಪಕ್ಕೆ ಫಲವುಣ್ಣುವ ಕಾಲ ಸನ್ನಿಹಿತವಾಗಿದೆ. ಇಂದಿನಿಂದ ಇಪ್ಪತ್ತನೆಯ ದಿನ ಘೋರವಾದ ಮರಣವು ನಿನಗೆ ಬರಲಿದೆ" ಎಂದರು. ಗೃಹಸ್ಥ ಹೆದರಿದ. ಸಾವಿನ ಭೀತ ಕಲ್ಪನೆಯಿಂದ ಅತನಿಗೆ ಅನ್ನಾಹಾರ ಸೇರಲಿಲ್ಲ ನಿದ್ರೆಯೂ ಬರಲಿಲ್ಲ. ಅಂತೂ ಇಪ್ಪತ್ತನೆಯ ದಿನ ಹಾಯಾಗಿ ಕಳೆದು ಹೋಯಿತು.

ಗೃಹಸ್ಥ ನಂತರ ಬಳಿಗೆ ಬಂದ" ಇಪ್ಪತ್ತನೆಯ ದಿನ ಮರಣವು ನನ್ನನು ಆವರಿಸಲಿದೆ ಎಂದರಲ್ಲವೆ? ತಮ್ಮ ಮಾತೇಕೆ ಸಟೆಯಾಯಿತು? ಎಂದು ಕೇಳಿದ. ನಂತರ ಮುಗುಳ್ನಕ್ಕರು- "ಆದಿರಲಿ, ಇಷ್ಟು ದಿನದಲ್ಲಿ ನೀನು ಏನು ಪಾಪಗಳನ್ನೆಲ್ಲ ಮಾಡಿದೆಯೆಂದು ಹೇಳುವೆಯಾ? ಕೇಳಿದರು.

"ಪಾಪವೆ? ಮರಣ ಬರುವುದೆಂಬ ಭಯದಿಂದ ಆ ಕುರಿತು ಯೋಚಿಸಲೂ ನನಗೆ ಬಿಡುವಾಗಲಿಲ್ಲ" ಎಂದು ಗೃಹಸ್ಥನ್ನೊತ್ತಲೇ ಸಂತರು, "ಹೌದಲ್ಲವೆ? ಮುಂದೆ ತನಗೆ ಸಾವು ಎಂದಾದರೊಂದು ದಿನ ಬಂದೇ ಬರುತ್ತದೆಂಬುದನ್ನು ನೆನಪಿಟ್ಟು ಕೊಂಡರೆ ಪ್ರತಿಯೊಬ್ಬ ಮನುಷ್ಯನಿಗೂ ಪಾಪ ಮಾಡಲು ಬಿಡುವೇ ಸಿಗುವುದಿಲ್ಲ. ಇದೇ ಪಾಪ ಮಾಡದಿರಲು ಏಕೈಕ ದಾರಿ" ಎಂದರು.

"ಅನನ್ಯಾಶ್ಚಿಂತ ಯಂತೋಮಾಂ ಯೇ ಜನಾಃ ಪರ್ಯುಪಾಸತೇ. ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ"–ಅಂದರೆ ಸದಾಕಾಲ ಭಗವಂತ ನನ್ನೇ ಚಿಂತಿಸುತ್ತ ಅವನಿಗೆ ಶರಣಾಗತರಾದವರು ತಮ್ಮ ಬದುಕಿಗಾಗಿ ಏನನ್ನು ಮಾಡಿ ಕೊಳ್ಳಬೇಕಿಲ್ಲ. ಅವರ ಯೋಗಕ್ಷೇಮದ ಹೊಣೆಯನ್ನು ಹೊತ್ತು ಭಗವಂತನೇ ಎಲ್ಲವನ್ನೂ ಮಾಡಿಕೊಡುತ್ತಾನೆ. ಮುಖ್ಯವಾಗಿ ಭಗವಂತನಿಗೆ ನಿಸ್ಪೃಹ ಭಾವದಿಂದ ಶರಣಾಗಬೇಕು ಅಷ್ಟೆ.

ಇನ್ನೊಬ್ಬರ ತಪ್ಪುಗಳನ್ನು ಹುಡುಕುತ್ತ ತನ್ನ ತಪ್ಪುಗಳ ಕುರಿತಾಗಿ ಯೋಚಿಸದಿರುವ ಮನುಷ್ಯ ಗುಲಗಂಜಿಯಂತೆ. ತನ್ನ ಬೆನ್ನ ಮೇಲಿರುವ ಕಪ್ಪುಬಣ್ಣದ ಬಗೆಗೆ ಗುಲಗಂಜಿ ಚಿಂತಿಸುವುದಿಲ್ಲವಂತೆ. ಅದೊಂದು ಸಲ ಒಬ್ಬ ಮಹಿಳೆ ವ್ಯಭಿಚಾರ ಮಾಡಿದುದು ತಪ್ಪೆಂದು ಆಪಾದಿಸಿ, ಊರಿನ ಪ್ರಮುಖರು ಅವಳನ್ನು ಮರಕ್ಕೆ ಕಟ್ಟಿ ಹಾಕಿದರು. ಅನಂತರ ಎಲ್ಲರೂ ಕಲ್ಲು ಹೊಡೆದು ಕೊಲ್ಲುವುದೆಂದು ಅವರ ನಿರ್ಧಾರ. ಅಲ್ಲಿಗೆ ಯೇಸುಕ್ರಿಸ್ತರು ಬಂದು ಮಹಿಳೆಯನ್ನೇಕೆ ಕೊಲ್ಲುತ್ತಿದ್ದಾರೆಂದು ವಿಚಾರಿಸಿದರು "ಆಕೆ ತಪ್ಪು ಮಾಡಿದ್ದಾಳೆ. ಈ ಶಿಕ್ಷೆ ಅದಕ್ಕಾಗಿ "ಎಂದರು ಊರವರು.

"ತಪ್ಪು ಮಾಡಿದವರನ್ನು ಶಿಕ್ಷಿಸಬೇಕು. ಆದರೆ ನಿಮ್ಮಲ್ಲಿ ಒಂದು ಮನವಿ. ಇದುವರೆಗೆ ಯಾರು ಒಂದೇ ಒಂದು ತಪ್ಪನ್ನು ಮಾಡಿಲ್ಲವೋ ಅವರು ಮೊದಲನೆಯ ಕಲ್ಲನ್ನು ಇವಳ ಮೇಲೆ ಹೊಡೆಯಲಿ. ಅನಂತರ ಉಳಿದವರೆಲ್ಲ ಕಲ್ಲು ಹೊಡೆಯಬಹುದು. ಸರಿಯಾಗಿ ಆತ್ಮ ವಿಮರ್ಶೆ ಮಾಡಿಕೊಂಡು ತಪ್ಪನ್ನೇ ಎಸಗದವರು ಮುಂದೆ ಬನ್ನಿ
'ಎಂದರು ಯೇಸು

ಒಬ್ಬನೂ ಮುಂದೆ ಬರದೆ ಮೌನ ತಾಳಿದಾಗ ಯೇಸುವು ಹೇಳಿದರು. 'ತನ್ನಿಂದ ಸಂಭವಿಸಿರಬಹುದಾದ ತಪ್ಪುಗಳ ಬಗೆಗೆ ಈ ಹೆಣ್ಣುಮಗಳು ಕಣ್ಣೀರು ಸುರಿಸುತ್ತಿದ್ದಾಳೆ. ಪಶ್ಚಾತ್ತಾಪವನ್ನು ಮೀರಿಸಿದ ಪ್ರಾಯಶ್ಚಿತ್ತ ಇಲ್ಲ. ಆದ್ದರಿಂದ ಇವಳು ನಿಮ್ಮೆಲ್ಲರ ಕ್ಷಮಾದಾನಕ್ಕೆ ಅರ್ಹಳೇ ಆಗಿದ್ದಾಳೆ."

ತಾನು ಬುದ್ಧಿ ಜೀವಿ, ಎಲ್ಲರಿಗಿಂತ ಮಿಗಿಲೆಂದು ಭಾವಿಸುವ ಈ ಮನುಷ್ಯ
ಇನ್ನೊಬ್ಬರ ತಪ್ಪುಗಳನ್ನು ಎತ್ತಿ ತೋರಿಸಬಲ್ಲ. ಮುಂದೆ ತಾನು ಈ ಜಗದಲ್ಲಿ ಇರು
ವುದಿಲ್ಲ ಎಂದು ಗೊತ್ತಿದ್ದರೂ ಇಡೀ ಜಗತ್ತನ್ನೆಲ್ಲ ತನ್ನದಾಗಿಸಿಕೊಳ್ಳಲು ಹವಣಿಸ
ಬಲ್ಲ. ಇದೆರಡನ್ನೂ ಗೆದ್ದುಕೊಂಡಾಗಲೇ ನಿಜವಾದ ಮಾನವತೆಯು ಉದಯ.

ಸಿದ್ಧಗಂಗಾ



# ಕಣ್ಣುಗಳ ಸಂರಕ್ಷಣೆ

ಡಾ. ಎಲ್.ಆರ್. ಹೆಗಡೆ, ಸಿದ್ದಾಪುರ (ಉತ್ತರ ಕನ್ನಡ)

ವಿಕಾಸವಾದದ (Evolution) ಪ್ರವರ್ತಕನಾದ ಚಾರ್ಲ್ಸ್ ಡಾರ್ವಿನ್‌ನು ಪ್ರಕೃತಿಯಿಂದ ಎಲ್ಲ ವಸ್ತುಗಳೂ ಸಹಜವಾಗಿ ಉತ್ಪನ್ನವಾಗಿ ವಿಕಾಸವನ್ನು ಪಡೆಯುತ್ತವೆ ಎಂದವನು. ಅವನಿಗೆ ಸೃಷ್ಟಿಯ ಉಗಮಕ್ಕೆ ಸೃಷ್ಟಿಕರ್ತನ ಅಗತ್ಯ ಅನಿಸಲೇ ಇಲ್ಲ. ಆದರೆ ಕಣ್ಣುಗಳ ಬಗ್ಗೆ ಚಿಂತನ ಮಾಡುವಾಗ ದೃಷ್ಟಿಶಕ್ತಿಯ ಅದ್ಭುತದ ಕಲ್ಪನೆ ಮಾಡಿದಾಗ ಅವನು ದಂಗಾಗಿ ಬಿಟ್ಟನು. ದೃಷ್ಟಿಶಕ್ತಿಯು ಸೃಷ್ಟಿಯ (?) ಅದ್ಭುತ ಸೃಷ್ಟಿ ಎಂದು ಅವನಿಗೆ ಅನಿಸಿತು. ಕಣ್ಣುಗಳು ರತ್ನಕಿಂತಲೂ ಹೆಚ್ಚು ಬೆಲೆಯುಳ್ಳವು. ಕಳೆದು ಹೋದ ರತ್ನಗಳನ್ನು ಮರಳಿ ಪಡೆಯಬಹುದು. ಆದರೆ ಕಳೆದು ಹೋದ ದೃಷ್ಟಿಯನ್ನು ಮರಳಿ ಪಡೆಯುವುದು ಸಾಮಾನ್ಯವಾಗಿ ಸಾಧ್ಯವಾಗದಿರುವಂಥದು.

"ಊಟದಿಂದ ಬಂತು ರೋಗ; ಮಾತಿನಿಂದ ಬಂತು ಜಗಳ" ಈ ಗಾದೆಯು ಸಾಮಾನ್ಯವಾಗಿ ಪರಿಚಿತವೇ ಆಗಿದೆ. ಕಣ್ಣುಗಳ ವಿಷಯದಲ್ಲೂ ಆಹಾರಕ್ಕೆ ಮಹತ್ವ ಅತಿಶಯವಾಗಿರುತ್ತದೆ. ಲಕ್ಷಾಂತರ ಶಿಶುಗಳ 'ಎ' ಜೀವಸತ್ವದ ಪೂರೈಕೆಯಾಗದ ಕಾರಣದಿಂದ ಕುರುಡುತನವನ್ನು ಪಡೆಯುತ್ತಾರೆ. ಬಡವರು ಸಹ ನುಗ್ಗೆ ಎಲೆ ರಸವನ್ನು ಮಿತವಾದ ಪ್ರಮಾಣದಿಂದ ಶಿಶುಗಳ ಹಾಲಿನಲ್ಲಿ ಸೇರಿಸಿ ಕುಡಿಸುತ್ತಿದ್ದರೆ ಈ ಕಾರಣದಿಂದಾಗುವ ಅಂಧತ್ವವುಂಟಾಗದು.

ಗರ್ಭಿಣಿಯ ಕುರಿತು, ಅವಳ ಆಹಾರ ವಿಹಾರ ಕುರಿತು ಹೆಚ್ಚು ಕಾಳಜಿಯನ್ನು ವಹಿಸುವುದರಿಂದ ಮುಂದೆ ಹುಟ್ಟುವ ಶಿಶುವಿಗೂ ಅದರಿಂದ ಹಿತವಾಗುತ್ತದೆ. ಗರ್ಭಿಣಿಗೆ ಹೊಟ್ಟೆಯಲ್ಲಿ ಶಿಶುವಿರುವ ಕಾರಣದಿಂದ ಎರಡುಪಟ್ಟು ಆಹಾರಬೇಕಿಲ್ಲ. ಸ್ವಲ್ಪ ಆಹಾರ ಸತ್ವವುಳ್ಳದ್ದು ಹೆಚ್ಚು ಬೇಕು. ಹೊಟ್ಟೆತುಂಬ ಅನ್ನವನ್ನು ತಿಂದರೆ, ಇಲ್ಲವೆ ಬಕ್ಕರಿಯನ್ನು ಬಕ್ಕರಿಸಿದರೆ ಶರೀರ ಪೋಷಣ ಹೆಚ್ಚಾಗದು. ಮಿತಾಹಾರ ಸತ್ವಪೂರಿತವಾದುದ್ದಾಗಿದ್ದರೆ ಸಾಕು. ಚನ್ನಾಗಿ ಆಹಾರವನ್ನು ನುರಿಸಿ ತಿನ್ನುವುದು ಸಹ ಅಷ್ಟೇ ಮಹತ್ವದ್ದಾಗಿದೆ. ಮೊಳಕೆ ತರಿಸಿದ ಹಸಿಯಾದ ಆಹಾರ ಉತ್ತಮ. ಉಳಿದ ಹಸಿರು ಕಾಯಿಪಲ್ಯ, ಹಣ್ಣು, ಹಾಲು, ಬೆಣ್ಣೆ ಸಾಮಾನ್ಯವಾಗಿ ಹಿತಕರವಾಗಿರುತ್ತವೆ.

ಹಳದಿ ಬಣ್ಣದ ಕಾಯಿಪಲ್ಯಗಳಲ್ಲಿ 'ಎ' ವಿಟಮಿನ್ ವಿಶೇಷವಾಗಿರುತ್ತದೆ. ಬೀಜ ಮತ್ತು ಮೇಲಾವರಣ ತೆಗೆದು ಹಾಕಿದ ಟೊಮೆಟೊ ಹಣ್ಣು, ಅಥವಾ ಹಣ್ಣಿನ ರಸ ಅತ್ಯುತ್ತಮ. (1 ವರ್ಷದೊಳಗಿನ ಶಿಶುಗಳಿಗೆ ಟೊಮೆಟೊ ತಿನ್ನಿಸುವುದು ಬೇಡ) ಹಸಿ ಗಜ್ಜರಿ ಶ್ರೇಷ್ಠ. (ಅಮಶಂಕೆಯವರಿಗೆ ಒಳ್ಳೆಯದಲ್ಲ.)

ಶಾಲೆಯ ಮಕ್ಕಳಿಗೂ ಆಹಾರ ವಿಷಯದಲ್ಲಿ ತಿಳುವಳಿಕೆ ನೀಡುವದರಿಂದ ಇಷ್ಟು ಸಾಕು. ವರ್ಜ್ಯ ಆಹಾರ ಐಸ್‌ಕ್ರೀಂ, ಹೆಚ್ಚು ಮಸಾಲೆ, ಅತಿ ಉಷ್ಣ ನೀರು, ತಣ್ಣಗಿನ ಜೀಯ, ವರ್ಜಿಸಿ. ಪಾಲಿಷ್ ಅಕ್ಕಿಯಲ್ಲಿ 'ಬಿ' ವಿಟಾಮಿನ್ ಹೋಗಿರುತ್ತದೆ. ಕೃತ್ರಿಮ ಪೇಯ, ಕೃತ್ರಿಮ ಆಹಾರ ವರ್ಜಿಸಿ. ಲಸ್ಸಿ ಬೇಡ. ಚಹಾ ಕಾಫೀ ತೀರ ಮಿತಿಯಿಂದ ಕುಡಿಯಬೇಕು. ತಂಬಾಕಿನ ಸೇವನೆ ಹಾಗೂ ಮದ್ಯಪಾನ ಈ ಚಟ-ಗಳಿಂದ ದೂರವಿರುವುದು ಒಳ್ಳೆಯದು.

ಶರೀರವು ನಿರೋಗಿಯಾಗಿರುವಂತೆ ಮಿತಾಹಾರ, ವಾರಕ್ಕೆ ಒಂದು ಹೊತ್ತು ಉಪವಾಸ, ಹಾಗೂ ನಿಯಮಿತ ವ್ಯಾಯಾಮ ಮಹತ್ವದ್ದು. 13 ತಾಸು ಆಹಾರ ತಕ್ಕೊಳ್ಳದಿರುವುದು ನಿಜವಾದ ಉಪವಾಸ. ಯೋಗವರ್ಗಗಳನ್ನು ಅನುಭವಿಕರು ನಡೆಸುವಲ್ಲಿ ಸೇರಿಕೊಂಡು ಯೌಗಿಕ ವ್ಯಾಯಾಮವನ್ನು ಅಭ್ಯಾಸ ಮಾಡುವುದು ಬಹಳ ಒಳ್ಳೆಯದು.

ಮೆಳ್ಳಗಣ್ಣು : "ಕುರುಡರಲ್ಲಿ ಮೆಳ್ಳಗಣ್ಣು ಶ್ರೇಷ್ಠ" ಎಂಬ ಗಾದೆಯಿದ್ದರೂ ಮೆಳ್ಳ-ಗಣ್ಣು ಕಣ್ಣುಗಳ ಮೇಲೆ ಬಹಳ ಆಯಾಸದ ಒತ್ತಡವನ್ನು ತರುತ್ತದೆ. ಶಿಶು ತೀರ ಚಿಕ್ಕದಿರುವಾಗ, ಆರು ತಿಂಗಳ ಶಿಶುವಿನಲ್ಲೂ ಮೆಳ್ಳಗಣ್ಣು ಪ್ರಾರಂಭವಾಗಬಹುದು. ಆದಷ್ಟು ಬೇಗ ಇದಕ್ಕೆ ಪರಿಹಾರಕ ಚಿಕಿತ್ಸೆ ಮಾಡಬೇಕು.

ಎರಡು ಕಣ್ಣುಗಳು ನೋಡುವಲ್ಲಿ ಕಣ್ಣು ಮೇಲೆ ನೋಡಿದರೆ ಮೇಗಣ್ಣು ಕೆಳಗೆ ನೋಡಿದರೆ ಕೆಳಗಣ್ಣು ಫೋಕಸ್ ಇರದು. ನೋಟದ ಕ್ಷೇತ್ರದ ವ್ಯತ್ಯಾಸವಿರುವುದು ಮೆಳ್ಳಗಣ್ಣಿನ ಮುಖ್ಯ ಲಕ್ಷಣ.

ಶಿಶು ಮಲಗಿದ್ದಾಗ ಅದರ ಒಂದು ಕಣ್ಣು ಬೇರೆಡೆ ನೋಡುತ್ತಿರುವುದು ಮುಂದುವರಿದರೆ ಮೆಳ್ಳಗಣ್ಣಾಗುವುದು ಸಾಧ್ಯ. ಆಗ ಅಡ್ಡನೋಡುವ ಕಣ್ಣನ್ನು ಸಹಜ ಸ್ಥಿತಿಗೆ ತರಲು ಸಹಜ ನೋಟ ನೋಡುವ ಕಣ್ಣಿನ ಮೇಲೆ ಒಂದು ಪಟ್ಟಿ ಕಟ್ಟಿ ಇಡಬೇಕು. ಆಗ ಅಡ್ಡ ನೋಡುವ ಕಣ್ಣನ್ನು ಸಹಜವಾಗಿಯೇ ಎಲ್ಲ ಕಡೆ ತಿರುಗಿಸುವ ಅಭ್ಯಾಸ ಮಾಡುವುದರಿಂದ ದೋಷವು ವಾಸಿಯಾಗಲು ಅನುಕೂಲವಾಗುತ್ತದೆ.

ಶಿಶುವಿನ ಸುತ್ತಲು ತಟ್ಟನೆ ಚಲನೆ ಮಾಡಬಾರದು. ಶಿಶುವಿನ ಹತ್ತಿರ ವಸ್ತುವನ್ನು ಒಮ್ಮೆ ನೂಕಿ ಹಿಡಿಯಬಾರದು. ಮೆಳ್ಳಗಣ್ಣಿಗೆ ಶಸ್ತ್ರಕ್ರಿಯೆಯನ್ನು ಮಾಡಿದರೆ ದೃಷ್ಟಿ ಪುನಃ ಉಂಟಾಗಲಾರದು. ಒರೆನೋಟ ಕಾಣುವುದು ಮಾತ್ರ ಸುಧಾರಿಸಬಹುದು. ಅದರಿಂದ ಈ ಕುರಿತು ತೀರ ಪ್ರಾರಂಭದಲ್ಲಿಯೇ ಮುಂಜಾಗ್ರತೆಯ ಕ್ರಮ ತೆಗೆದುಕೊಳ್ಳಬೇಕು.



ರೋಗ ಕಾರಣವಾಗಿ ಮೆಳ್ಳಗಣ್ಣಾಗಬಹುದು. ಹೊಟ್ಟೆ ಹುಳುಗಳು, ಸೆಳವು, ಗೋಣೆದಡಾರು ಅಪಸ್ಮಾರ, ಜಲಮಸ್ತಕ ರೋಗ, ಕಣ್ಣಿನರಗಳ ಪಕ್ಷಾಘಾತ, ವೆ.ದುಳಿನ (ಗಡ್ಡೆ ಮುಂತಾದ) ರೋಗಗಳು, ಸೂರ್ಯಾಘಾತ ಮುಂತಾದವುಗಳಿಂದ ಮೆಳ್ಳಗಣ್ಣಾದರೆ ಆಯಾ ರೋಗಕ್ಕೆ ಲಕ್ಷಣಾನುಸಾರ ಔಷಧಿಮಾಡಿ ಹೋಮಿಯೋಪಥಿಯಲ್ಲಿ ಗುಣ ಮಾಡಬಹುದು. ಕಣ್ಣುಗಳ ಶಸ್ತ್ರಕ್ರಿಯೆ ಅಸಮರ್ಪಕವಾಗಿ, ಇಲ್ಲವೆ ಮುಟ್ಟಿನ ಅಕ್ರಮಗಳಿಂದಲೂ ಈ ದೋಷವಾಗಬಹುದು.

ಸಮೀಪದೃಷ್ಟಿ ದೋಷಕ್ಕೂ ಇತರ ದೃಷ್ಟಿ ಸುಧಾರಣೆಗೂ ಲಂಬ ವಕ್ರ ಚಲನೆ (Long Swing)ಯ ವ್ಯಾಯಾಮ ಬಹಳ ಉತ್ತಮ. ಆರು ಇಂಚು ಅಂತರದಲ್ಲಿ ಪಾದ ಇಟ್ಟು ನಿಲ್ಲಬೇಕು. ಬಲ ಪಕ್ಕಕ್ಕೆ ಶರೀರ ತಿರುಗಿಸುವಾಗಲೇ ಎಡಪಾದದ ಹಿಮ್ಮಡವನ್ನೆತ್ತಬೇಕು. ತಲೆ, ಕಣ್ಣು, ತೋಳು ಇವು ಶರೀರದ ಚಲನೆಯನ್ನು ಗ್ರಹಿಸುವಂತೆ ಆರಾಮವಾಗಿ ಇರಲಿ. ಮುಂದೆ ಎಡ ಹಿಮ್ಮಡವನ್ನು ನೆಲದ ಮೇಲಿಡಿರಿ. ಶರೀರವನ್ನು ಎಡಪಕ್ಕಕ್ಕೆ ತಿರುಗಿಸುವಾಗ ಬಲ ಹಿಮ್ಮಡವನ್ನು ಎತ್ತಿರಿ. ಹೀಗೆ ಪಾದಗಳನ್ನು ಬಲ, ಎಡ, ಹೀಗೆ ಎತ್ತುವ ಸಮಯ 180 ಅಂಶಗಳ ಕಮಾನಿನಲ್ಲಿ ಶರೀರ ಹಾಗು ತಲೆ ತಿರುಗಿಸಿರಿ. ಈ ಚಲನೆ ಏನೂ ಒತ್ತಡ ಇಲ್ಲದೆ ಸರಾಗವಾಗಿ ಸಾಗಲಿ. ಮಿನಿಟಿಗೆ 16 ಕಮಾನು ಚಲನೆ ಮಾಡುವ ಕ್ರಮ ಬಹಳ ಹಿತಕರವಾದುದು.

ಓರೆಗಣ್ಣನ್ನು ಸರಿಪಡಿಸಲು ನೇತ್ರದರ್ಶಕ (Eye Scope) ವ್ಯಾಯಾಮ ಕ್ರಮವಿದೆ. ಇದಕ್ಕಾಗಿ ತಜ್ಞರ ಮಾರ್ಗದರ್ಶನ ಬೇಕು. ಮುಂಬಯಿಯ "ಡಾ|| ಗಾಲಾ. ಗಾಲಾ ಪಬ್ಲಿಷರ್ಸ್, ನವನೀತ ಭವನ, ಭವಾನಿ ಶಂಕರ ರೋಡ್, ದಾದರ್ ಮುಂಬಯಿ-400028." ಇಂಥ ತಜ್ಞರನ್ನು ಆಶ್ರಯಿಸಬೇಕು. ಇಂಗ್ಲಿಷ್‌ನಲ್ಲಿ ಪತ್ರ ವ್ಯವಹಾರ ಮಾಡಿರಿ.

ತಲೆಯನ್ನು ತಣ್ಣಗೆ, ಹೊಟ್ಟೆಯನ್ನು ಮೆತ್ತಗೆ, ಕಾಲುಗಳನ್ನು ಬೆಚ್ಚಗೆ ಇಟ್ಟುಕೊಳ್ಳಬೇಕು. ತಲೆ ತಣ್ಣಗಿರಬೇಕು. ಎಂದರೆ ತಲೆಯ ಮೇಲೆ ಬರ್ಫ ಇಟ್ಟುಕೊಳ್ಳುವುದಿಲ್ಲ. ಮಿದುಳು ತಣ್ಣಗಿರಬೇಕು ಎಂದರೆ, ದುಃಖ, ಚಿಂತೆ, ಕೋಪ-ತಾಪಗಳನ್ನು ಆದಷ್ಟು ಕಡಿಮೆ ಮಾಡಿಕೊಳ್ಳಬೇಕು. ತಲೆಗೆ ಬಿಸಿನೀರನ್ನು ಹಾಕಬಾರದು. ಉಗುರು ಬೆಚ್ಚನ್ನ ನೀರ ಸ್ನಾನ ಎಲ್ಲರಿಗೂ ಹಿತಕರವಾಗುತ್ತದೆ.

ಹೊಟ್ಟೆ ಮೆತ್ತಗಿರಬೇಕು ಎಂದರೆ ಅಧಿಕ ಆಹಾರ, ಕೊಬ್ಬಿನ ಆಹಾರ, ವ್ಯಾಯಾಮ (ಕೆಲಸ) ವಿಲ್ಲದಿರುವಿಕೆ ಮುಂತಾದವುಗಳಿಂದ ಹೊಟ್ಟೆ ಚರ್ಮ ಹಾಗೂ ಹೊಟ್ಟೆ ದಪ್ಪವಾಗಿರಬಾರದು. ಅಪಚನ, ಮಲಬದ್ಧತೆ ದೂರಮಾಡಬೇಕು. ಮಲ-ಮೂತ್ರ ಮಾಡುವುದನ್ನು ತಡೆಯುವುದರಿಂದ ದೋಷ ಸಂಚಯವಾಗುತ್ತದೆ.

ತಣ್ಣೀರಿನಿಂದ ಪಾದ ತೊಳೆದುಕೊಂಡರೂ ಒಣ ವಸ್ತ್ರದಿಂದ ಕಾಲುಒರಸಿಕೊಳ್ಳ
ಬೇಕು. ನಿಯಮಿತವಾದ ನಡೆವ ವ್ಯಾಯಾಮ ಮಾಡಬೇಕು. ಮೂಗಿನ ಒಳಗಿರುವ
ಕೂದಲುಗಳಿಗೂ ಕಣ್ಣುಗಳ ಆರೋಗ್ಯಕ್ಕೂ ಸಂಬಂಧವಿರುವಂತಿದೆ. ಮೂಗಿನೊಳಗಿರುವ
ಕೂದಲುಗಳನ್ನು ಪೂರ್ತಿಯಾಗಿ ತೆಗೆದುದರಿಂದ ದೃಷ್ಟಿಮಾಂದ್ಯವಾಗುವುದೆಂದು ಹಳ್ಳಿ
ವೈದ್ಯರು ಹೇಳಿದ್ದುಂಟು.

ಕಣ್ಣುಗಳು ಉರಿವುದಕ್ಕೆ ಇತ್ತೀಚಿಗೆ ಹುಡುಗರು ಹಿಪ್ಪಿಗಳಂತೆ ಉದ್ದ ಕೂದಲ-
ನ್ನು ಬೆಳೆಯಿಸಿಕೊಳ್ಳುವುದು ಒಂದು ಕಾರಣವೆಂದು ಪ್ರಸಿದ್ಧ ಆಯುರ್ವೇದ ನೇತ್ರ
ತಜ್ಞರಾದ ಡಾ:ಗಾಲಾ ಎಂಬುವರು ಬರೆದಿದ್ದಾರೆ. ಆದರೆ ಭಾರತೀಯ ನಾರಿಯರು
ಉದ್ದ ಕೂದಲನ್ನು ಬೆಳಸಿಕೊಳ್ಳುವುದರಿಂದ ಅವರಿಗೆ ಈ ಬಾಧೆಯಾಗಿರುವುದನ್ನು
ಯಾರೂ ತಿಳಿಸಲಿಲ್ಲ.

ಅಂಗಾಲುಗಳಿಗೂ ಕಣ್ಣುಗಳಿಗೂ ನೇರ ಸಂಬಂಧವಿದೆ. ತೀಕ್ಷ್ಣ ಔಷಧಿಗಳಿಂದ
ಕಣ್ಣುರಿ, ಅಂಗಾಲುರಿ ಉಂಟಾಗುತ್ತವೆ. ಬಿಸಿಲಿನಲ್ಲಿ ಪ್ಲಾಸ್ಟಿಕ್ ಚಪ್ಪಲಿ ಹಾಕಿಕೊಂಡು
ನಡೆಯುತ್ತಿರುವುದರಿಂದಲೂ ಈ ಬಾಧೆಯಾಗುತ್ತದೆ. ಹೆಚ್ಚು ಹೊತ್ತು ಪ್ಲಾಸ್ಟಿಕ್
ಇಲ್ಲವೆ ರಬ್ಬರ್ ಶೂ ಧರಿಸುವುದು ಹಿತಕರವಾಗದು.

ವಿಶೇಷವಾಗಿ ಮಧ್ಯ ವಯಸ್ಸಿನಲ್ಲಿ ಮೋತಿಬಿಂದು ರೋಗವಾಗುತ್ತದೆ. ಪಾದಗ-
ಳಿಗೆ ಶುದ್ಧ ಹರಳೆಣ್ಣೆ ಲೇಪಿಸಿಕೊಂಡು ಮಲಗುತ್ತಿರುವುದರಿಂದ ಮೋತಿ ಬಿಂದು ಆಗು
ವುದನ್ನು ಪ್ರತಿಬಂಧಿಸಬಹುದು ಎಂದು ಡಾ:ದರ್ಬಾರಿ ಎಂಬ ಹೋಮಿಯೋಪಥಿ ಚಿಕಿ
ತ್ಸಕರು ಬರೆದಿದ್ದಾರೆ.

ಸ್ವಚ್ಛವಾದ ತಣ್ಣೀರಿನಿಂದ ಆಗಾಗ ಕಣ್ಣು ತೊಳೆದುಕೊಳ್ಳುವುದು ಹಿತಕರವಾ-
ದುದು. ಪಿಂಗಾಣಿ ಬಸಿಯಲ್ಲಿ ನೀರನ್ನು ಹಾಕಿಕೊಂಡು ಕಣ್ಣು ಅದ್ದಿಸಿ ಕಣ್ಣುಗೊಂಬೆ
ತಿರುಗಿಸಿಕೊಂಡು ಕಣ್ಣು ತೊಳೆದುಕೊಳ್ಳುವುದು ಹಿತಕರ. ಆದರೆ, ಕೆಂಗಣ್ಣು ಬೇನೆ
ಬಂದಾಗ ಸದಾ ಬಿಸಿನೀರಿನಲ್ಲಿ ಅದ್ದಿದ ಬಟ್ಟೆಯಿಂದ ಕಣ್ಣಿಗೆ ಶೇಕ್ ಮಾಡಿಕೊಳ್ಳುವುದು
ಚಿಕಿತ್ಸೆಯ ಒಂದು ಭಾಗವೇ ಆಗುತ್ತದೆ. ಉಪದಂಶದ ಕರಿಯಾಲಿ ಯುರಿತದಲ್ಲೂ ತಣ್ಣೀ
ರುಬೇಡ. ಕೆಲವು ದಿನ ಸ್ವಚ್ಛ ಬಾಟಲಿಯಲ್ಲಿಟ್ಟ ಸ್ವಮೂತ್ರದ ಬಿಂದುಗಳನ್ನು ಕಣ್ಣುಗಳಿಗೆ
ಹಾಕಿಕೊಳ್ಳುವುದರಿಂದ ಕೆಂಗಣ್ಣುರೋಗ ಗುಣವಾಗುತ್ತದೆ. ದೃಷ್ಟಿಶಕ್ತಿ ಹೆಚ್ಚಾಗುತ್ತದೆ.

ಬಿಸಿನೀರಿಗೆ ಉಪ್ಪನ್ನು ಸೇರಿಸಿ ಉಗುರುಬೆಚ್ಚಗಾದಾಗ ಅದರಿಂದ ಕಣ್ಣು ತೊಳೆ-
ಯಬೇಕು. ಅರ್ಧ ಚಮಚ ಜೇನುತುಪ್ಪವನ್ನು ಅರ್ಧ ಪಿಂಟ ನೀರಿಗೆಹಾಕಿ ಐದುಮಿನಿಟ್
ಕುದಿಸಿ ತೆಗೆದಿಟ್ಟು ಕಣ್ಣುಗಳನ್ನು ದಿನಾಲು ಮೂರು ಸಾರಿ ತೊಳೆಯುತ್ತಿರಬೇಕು.
ಜೇನುತುಪ್ಪವನ್ನು ನೀರಿಗೆ ಸೇರಿಸಿ ರಾತ್ರಿ ಮಲಗಿದಾಗ ಸ್ವಚ್ಛ ಬಟ್ಟೆಯಲ್ಲಿ ಹಾಕಿ
ಮುಚ್ಚಿದ ಕಣ್ಣುಗಳ ಮೇಲೆ ಇಟ್ಟುಕೊಳ್ಳುವುದೂ ಉತ್ತಮ.
ಸಿದ್ಧಗಂಗಾ



ಎಡಗಣ್ಣಿಗೆ ದಕ್ಷಿಣ ಬಲಗಣ್ಣಿಗೆ ಉತ್ತರ ಇರುವ ಸಣ್ಣ ಅಯಸ್ಕಾಂತಗಳನ್ನು
ಕಣ್ಣುಮುಚ್ಚಿ ಮೂರು ಮಿನಿಟ ಇಟ್ಟುಕೊಂಡರೆ ಆಯಾಸ ಪರಿಹಾರವಾಗುತ್ತದೆ. ಶುದ್ಧ
ಜೇನುತುಪ್ಪವನ್ನು ಕಣ್ಣಿಗೆ ಹಾಕಿಕೊಳ್ಳುವುದರಿಂದ ಕಣ್ಣು ನರಗಳ ಆಯಾಸ ಕಡಿಮೆ-
ಯಾಗುತ್ತದೆ. ಅದಕ್ಕೆ ಸ್ವಲ್ಪ ಲಿಂಬೆರಸ ಸೇರಿಸಲೂ ಬಹುದು. ದೊರೆತರೆ ಅರಲನ್ನು
(CLAY)ಸ್ವಚ್ಛ ಬಟ್ಟೆಯ ಮೇಲೆ ಹರಡಿಕೊಂಡು ಆಬಟ್ಟೆಯನ್ನು ಕಣ್ಣುಗಳಮೇಲೆ
ಇಟ್ಟು ಮಲಗಿರುವುದು ಉತ್ತಮ.

ಕಣ್ಣುಗಳಿಗೆ ಆಯಾಸವಾಗುವಂತೆ ಅವನ್ನು ಉಪಯೋಗಿಸುವುದರಿಂದ ಕಣ್ಣುಗಳ
ಹಲವು ರೋಗಗಳು ಆಗುವ ಸಾಧ್ಯತೆ ಇರುತ್ತದೆ. ಓದು ಬರಹ ಇಲ್ಲದ ನೈಸರ್ಗಿಕ
ಪರಿಸರದಲ್ಲಿ ನೈಸರ್ಗಿಕ ಜೀವನ ನಡೆಯಿಸುತ್ತಿರುವ ಅಲಾಸ್ಕಾದ ಎಸ್ಕಿಮೊ ಜನರಲ್ಲಿ
ದೃಷ್ಟಿದೋಷ ಕಾಣುವುದಿಲ್ಲ. ಅಮೆರಿಕೆಯ ಸರ್ಕಾರದವರು ಶಿಕ್ಷಣ ಕ್ರಮ ರೂಢಿಸಿದ
ಮೇಲೆ ಮುಕ್ಕಾಲು ಸಂಖ್ಯೆಯ ಹುಡುಗರಿಗೆ ಲಘು ದೃಷ್ಟಿ (ಸಮೀಪ ದೃಷ್ಟಿ) ಮೇಲೆ
ದೋಷವುಂಟಾಯಿತು. ಕಣ್ಣುಗಳನ್ನು ಹತ್ತಿರ ಇಟ್ಟು ನೋಡುತ್ತಿರುವುದು ಈ
ದೋಷಕ್ಕೆ ಒಂದು ಮುಖ್ಯ ಕಾರಣ. ಕೆಲವು ನೇತ್ರರೋಗ ತಜ್ಞರ ಅಭಿಪ್ರಾಯದಲ್ಲಿ
ಇದಕ್ಕೆ ಅನುವಂಶಿಕ ದೋಷವೇ ಮುಖ್ಯ ಕಾರಣ; ಎರಡೂ ಕಾರಣ ಇರಬಹುದು.

ಅತಿಯಾಗಿ ಚಲನಚಿತ್ರ ನೋಡುವುದು ಟಿ ವಿ. ನೋಡುವುದು ದೊಡ್ಡವರ ಕಣ್ಣು
ಗಳಿಗೂ ಹಿತಕರವಲ್ಲ. ಟೀ ವಿ ಮುಂದೆ ಕುಳಿತಿರುವ ಅಂತರ 18 ಅಡಿ ಇರಬೇಕು.
ಹತ್ತು. ಅಡಿಗಿಂತ ಕಡಿಮೆ ಅಂತರದಲಿ ಟೀ.ವಿ. ನೋಡಕೂಡದು. ತೀರ ದೂರದಿಂದಲೂ
ಟೀ ವಿ ನೋಡಬಾರದು. ವಿಶೇಷವಾಗಿ 14 ವರ್ಷಕ್ಕಿಂತ ಕಡಿಮೆ ವಯಸ್ಸಿನವರಿಗೆ ಇದ
ರಿಂದ ದೃಷ್ಟಿಶಕ್ತಿಗೆ ಧಕ್ಕೆಯಾಗಬಹುದು. ಮುಂಬೈಯಲ್ಲಿ ಇಂಥ ಮಕ್ಕಳು ಹೀಗೆ ಬಹಳ
ಹೊತ್ತು ಟಿವಿ ನೋಡಿ ದೃಷ್ಟಿಮಾಂದ್ಯಕೆ ಗುರಿಯಾಗಿದ್ದಾರೆ. ಇದಕ್ಕೆ ಯಾವುದೇ ಪರಿ
ಹಾರವಿಲ್ಲವೆಂದು ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ಬಂದಿತ್ತು.

ಅತಿಶಯ ಪ್ರಖರವಾದ ಬೆಳಕಿನಲ್ಲಿ ಬಹಳ ಹೊತ್ತು ಕೆಲಸ ಮಾಡುವುದು ಒಳ್ಳೆ
ಯದಲ್ಲ. ರಕ್ತದ ಏಡಿ ಗಂತಿ (ಕ್ಯಾನ್ಸರ್) ರೋಗಕ್ಕೂ ಇದು ಕಾರಣವಾಗಬಹುದು.
ಸೂರ್ಯನ ಕಿರಣ ಕಣ್ಣಿಗೆ ಹಿತವಾದರೂ ನೇರವಾಗಿ ಸೂರ್ಯನನ್ನು ನೋಡುತ್ತಿರು
ವುದು ಒಳ್ಳೆಯದಲ್ಲ. ಗ್ರಹಣಕಾಲದಲ್ಲೂ ನೇರವಾಗಿ ಸೂರ್ಯಬಿಂಬ ನೋಡಬಾರದು.
ಮೀನಗಳಂತೆ ದೇವತೆಗಳೂ ಅನಿಮಿಷರಂತೆ. ಆದರೆಮನುಷ್ಯರಿಗೆ ಕಣ್ಣುರೆಪ್ಪೆ ಇರು
ವುದು ರೆಪ್ಪೆಮುಚ್ಚಿ ತೆರೆಯುತ್ತಿರುವುದಕ್ಕೆ, ರೆಪ್ಪೆ ಮುಚ್ಚುತ್ತಿರುವುದು ಆಯಾಸ ಪರಿ
ಹಾರಕ್ಕೆ ಅವಶ್ಯ. ಕಣ್ಣುಗಳನ್ನು ಕೆಕ್ಕರಿಸಿ ನೋಡುತ್ತಲೇ ಇರಬಾರದು

ಅರ್ಧತಾಸು ಓದಿದ ಮೇಲೆ ಸ್ವಲ್ಪ ಹೊತ್ತು ಕಣ್ಣಿಗೆ ವಿಶ್ರಾಂತಿಬೇಕು. ದೃಷ್ಟಿ ಇಟ್ಟು ತಗ್ಗಿಸಬೇಕು. ಒಮ್ಮೆ ದೂರ, ಒಮ್ಮೆ ಸಮೀಪ ಹೀಗೆ ದೃಷ್ಟಿಯ ಅಂತರವಲ್ಲಿ ವ್ಯತ್ಯಾಸ ಮಾಡಬೇಕು. ಕಣ್ಣು ಗೊಂಬೆಗಳನ್ನು ವರ್ತುಲ ರೀತಿ ತಿರುಗಿಸಬೇಕು. ಅಂದರೆ ಕಣ್ಣಿನ ಎಲ್ಲಾ ಭಾಗಗಳಿಗೂ ವ್ಯಾಯಾಮ ಆದಂತಾಗುತ್ತದೆ.

**ಅಂಗೈ ಮುಚ್ಚಿಕೆ :-** ಒಂದು ಕೈ ಬೆರಳುಗಳನ್ನು ಕಣ್ಣುಗಳಿಗೆ ತಾಗದ ಹಾಗೆ ಮತ್ತೊಂದರ ಕೈ ಬೆರಳುಗಳ ಮೇಲೆ ಇಟ್ಟುಕೊಳ್ಳಬೇಕು. ಬೆಳಕು ಅಂಗೈಯ ಒಳಗೆ ಬಾರದಂತೆ ಅಂಗೈ ಮುಚ್ಚಿರಬೇಕು. ಎರಡರಿಂದ ಹತ್ತು ಮಿನಿಟುಗಳವರೆಗೆ ಅನುಕೂಲಕ್ಕೆ ತಕ್ಕಂತೆ ಹೀಗೆ ನಾಲ್ಕು ಸಾರಿಯಂತೆ ಅಂಗೈ ಮುಚ್ಚಿಕೆ ಇರಲಿ. ಮೋತಿ ಬಿಂದು ರೋಗವಾದವನು ಮುಖ್ಯವಾಗಿ ತಾಸಿಗೊಮ್ಮೆ ಈ ಅಂಗೈ ಮುಚ್ಚಿಕೆಯಿಂದ ಕಣ್ಣುಗಳಿಗೆ ವಿಶ್ರಾಂತಿ ನೀಡಬೇಕು.

**ಕೆಂಗಣ್ಣು ಬೇನೆ :-** ಇವರಲ್ಲಿ ಕಣ್ಣು ಕೆಂಪಗಾಗುತ್ತವೆ. ಇದರಲ್ಲಿ ದ್ರವರೂಪದಲ್ಲಿ ನೀರಾಗಲಿ ರಸಿಕೆಯಾಗಲಿ ಬರುತ್ತದೆ ಕ್ರಿಮಿ ಸೋಂಕಿನಿಂದಾದರೆ ಬೇಗನೆ ಮತ್ತೊಂದು ಕಣ್ಣಿಗೂ ರೋಗ ಹಬ್ಬುತ್ತದೆ. ರಾಸಾಯನಿಕ ಇಲ್ಲವೆ ಬೇರೆವಸ್ತುವಿನಿಂದ ಕೆರಳಿ ಇಲ್ಲವೆ, ಅಲರ್ಜಿಯಿಂದಲೂ ಈ ರೋಗವಾಗಬಹುದು.

ಶುದ್ದ ಅರಿಶಿನ ಕದಡಿದ ನೀರಿನಿಂದ ಕಣ್ಣು ತೊಳೆದುಕೊಳ್ಳಬಹುದು. ನಂದಿ ಬಟ್ಟಲು (ನಂಜಟ್ಲೆ) ಬಿಳಿ ಹೂಗಳನ್ನು ಸ್ವಚ್ಛ ಕೈಯಿಂದ ಹಿಂಡಿ ಕಣ್ಣುಗಳಿಗೆ ಹಾಕಿ ದರೆ ಗುಣವಾಗುತ್ತದೆ. ಡಾ. ಹಿ.ಜಿ. ನವಲಿಯವರು "ಪಥ್ಯ ಆಹಾರಗಳು" ಎಂಬ ಚಿಕ್ಕಗ್ರಂಥದಲ್ಲಿ ಚವಳಿಕಾಯಿ ರಸದ ಅಂಜನ ಹಚ್ಚಲು ತಿಳಿಸಿದ್ದಾರೆ. ಅಲಕ್ಷಿಸಿದರೆ ರವೆಗಣ್ಣು ಎಂಬ ಗಂಭೀರ ರೋಗವಾಗಬಹುದು.

**ರವೆಗಣ್ಣು :** (ಟ್ರಾಕೊಮಾ। ಇದಕ್ಕೆ ಟೆಟ್ರಾಸೈಕ್ಲಿನ್ ಪರಿಣಾಮಕಾರಿಯೆಂದು ಹೇಳಲಾಗುತ್ತದೆ. ಹೋಮಿಯೋಪಥಿ ಔಷಧಿ ಪ್ರಯೋಜನಕಾರಿಯಾಗುತ್ತದೆ. ಕಣ್ಣುಗಳು ಕೆಂಪುದಾಸವಾಳ ಹೂವಿನಂತೆ ಕೆಂಪಗಾಗುತ್ತವೆ. ಕಣ್ಣುಗಳಲ್ಲಿ ಅತಿಶಯ ಉರಿ ಹಾಗೂ ನೋವು ಇರುತ್ತಿದ್ದು, ರೆಪ್ಪೆಗಳಲ್ಲಿ ಉಸುಕು ಇರುವಂತೆ ಅಡೆತಡೆಯಾಗುತ್ತಿರುತ್ತದೆ.

**ಮೋತಿಬಿಂದು :-** ಇದು ಸಾಮಾನ್ಯವಾಗಿ ಮಧ್ಯವಯಸ್ಸಿನವರ ದೃಷ್ಟಿ ದೋಷ. ಆದರೆ ಕಣ್ಣಿಗೆ ಪೆಟ್ಟಾದ ಕಾರಣದಿಂದ ಇದು ಎಳೆಯರಿಗೂ ಈ ರೋಗ ವಾದೀತು. ಚರ್ಮ ರೋಗವನ್ನು ತೀಕ್ಷ್ಣ ಮುಲಮು ಹಚ್ಚಿ ಹತ್ತಿಕ್ಕಿದುದರಿಂದ ಮೋತಿ ಬಿಂದು ರೋಗ. ಆದರೆ ಸರಿಯಾದ ಹೋಮಿಯೋಪತಿ ಔಷಧಿ ನೀಡುವುದರಿಂದ ಚರ್ಮರೋಗ ಹೊರಗೆ ಬಂದು ಮೋತಿಬಿಂದು ಗುಣವಾಗುವುದು.



ಡಿ. ಜೀವಸತ್ವದ ಕೊರತೆ ಮೋತಿಬಿಂದುವಿಗೆ ಒಂದು ಮುಖ್ಯಕಾರಣ. ಕಣ್ಣುಗಳಿಗೆ ಅತಿಯಾಗಿ ಕೆಲಸ ಮಾಡುವುದು, ಪ್ರಮುಖವಾದ ಸೂರ್ಯನ ಬಿಸಿಲಿನಲ್ಲಿ ಹೆಚ್ಚಾಗಿ ತಿರುಗಾಟ ಮಾಡುವುದು ಸಹ ಕಾರಣವಾಗಬಹುದು ಹಗಲಿನಲ್ಲಿ ದೃಷ್ಟಿ ಮಂದವಾಗಿ ರಾತ್ರಿ ದೀಪದ ಬೆಳಕಿನಲ್ಲಿ ಕಾಣುವುದು ಮೋತಿಬಿಂದುವಿನ ಒಂದು ಲಕ್ಷಣ. ಉತ್ತಮ ದರ್ಜೆಯ ಕಪ್ಪು ಕನ್ನಡಕವನ್ನು ಬೇಸಿಗೆಯಲ್ಲಿ ಮಾತ್ರ ಧರಿಸಬೇಕು.

ಆಯಸ್ಕಾಂತ ಚಿಕಿತ್ಸೆಯನ್ನು ಯೋಗ್ಯ ರೀತಿಯಿಂದ ತೀರಾ ಪ್ರಾರಂಭದಿಂದ ಕೈಗೊಂಡರೆ ಮೋತಿಬಿಂದು ಗುಣವಾಗಬಹುದು ಮತ್ತು ಆಯಸ್ಕಾಂತ ಕನ್ನಡಕ ದೊರೆಯುತ್ತದೆ. ಅದನ್ನು ಧರಿಸಿಕೊಳ್ಳಬೇಕು. ಮೋತಿಬಿಂದು ಪೂರ್ತಿ ಬೆಳೆದಮೇಲೆ ಒಬ್ಬ ವ್ಯಕ್ತಿಯು ಒಂದು ನೂರಾ ಹತ್ತು ದಿನ ಲಂಘನ ಮಾಡಿ ಮೋತಿಬಿಂದು ಗುಣವಾಗಿದೆಯಂತೆ. ಆದರೆ ಇದು ವ್ಯಾವಹಾರಿಕ ವೆನಿಸದು.

ಮೋತಿಬಿಂದುವಿನ ಶಸ್ತ್ರಕ್ರಿಯೆಯಲ್ಲಿ ಅದ್ಭುತ ಪ್ರಗತಿಯಾಗಿದೆ. ಲೇಸರ್ ಕಿರಣಗಳಿಂದ ಶಸ್ತ್ರಚಿಕಿತ್ಸೆಗೆ ಮಾಡಿದ ದಿನವೇ ಮರಳಬಹುದು. ಆದರೆ ತಗಲುವ ವೆಚ್ಚ ಬಹಳ. ಶಸ್ತ್ರಕ್ರಿಯೆಯನಂತರ ಹಲವು ತಿಂಗಳ ವಿಶ್ರಾಂತಿ ಕಣ್ಣಿಗೆ ಬೇಕು. ಆದರೂ ಶಸ್ತ್ರಕ್ರಿಯೆಯ ಅನಂತರ ಮೊದಲಿನ ಶಕ್ತಿ ಕಣ್ಣಿಗೆ ಬಾರದು. ತೀರಾ ವಯಸ್ಸಾದವರಿಗೆ ತೀರಾ ನರದೌರ್ಬಲ್ಯದ ಮೂಲಕ ದೃಷ್ಟಿ ಮರಳದಿರಬಹುದು.

**ಕಾಚಬಿಂದು, ಹತ್ತಗಣ್ಣು, ಗಾಜುಗಣ್ಣು,** ( Glaucoma ) ಈ ಭಯಂಕರ ಕಣ್ಣುಗಳ ರೋಗವು ಕಣ್ಣು ಕುರುಡು ಮಾಡುವ ಒಂದು ಮುಖ್ಯ ರೋಗವಾಗಿದೆ. ಕಣ್ಣುಗಳಲ್ಲಿರುವ ದ್ರವವಸ್ತುವಿನ ಒತ್ತಡವು ಸಾಮಾನ್ಯವಾಗಿ ಇರುವುದಕ್ಕಿಂತ ಹೆಚ್ಚಾಗುವುದರಿಂದ ದೃಷ್ಟಿಶಕ್ತಿಯ ವ್ಯವಸ್ಥೆಯಲ್ಲಿ ಇಳಿತವಾಗುವುದಕ್ಕೆ ಈ ಒತ್ತಡವು ಅಕ್ಷಿಪಟಲ (ರೇಟಿನಾ)ಕ್ಕೆ ಹರಿಯುವ ಸಾಮಾನ್ಯವಾದ ರಕ್ತ ಸಂಚಲನೆ ತಡೆಯುವುದೇ ಕಾರಣ, ಕ್ರಮೇಣ ದೃಷ್ಟಿಯ ಕುಂದುವಿಕೆಯಾಗುತ್ತಾ ಹೋಗುತ್ತದೆ. ಇದನ್ನು ಚಿಕಿತ್ಸೆಯಿಂದ ಸರಿಯಾದ ರೀತಿಗೆ ತಾರದಿದ್ದರೆ ಅಕ್ಷಿಪಟಲದ ನಾಶವಾಗಿ ಪೂರ್ತಿ ಕಣ್ಣು ಕುರುಡಾಗುತ್ತದೆ.

ಇದರಲ್ಲಿ ತೀವ್ರಕವಾದ ಹಾಗೂ ಮಂದಗಾಮಿಯಾದ ಕಾಚಬಿಂದು ಎಂಬ ಎರಡು ಪ್ರಕಾರಗಳಿರುತ್ತವೆ. ನೇತ್ರಗೋಲದ ನೋವಿನಿಂದ ಪ್ರಾರಂಭವಾಗುವ ತೀವ್ರತರ ರೋಗದಲ್ಲಿ ಜೋರಾಗಿ ತಲೆ ಸಿಡಿತವಿರುತ್ತದೆ. ಕಣ್ಣುಗಳಲ್ಲಿನ ದ್ರವವು ಸೋರಿ ಆರಿ ಹೋಗಿ ಕಣ್ಣುಗೊಂಬೆಯ ಸ್ಥಿತಿಸ್ಥಾಪಕತ್ವವು ನಷ್ಟವಾಗಿ ಅಂಧತ್ವ ಬರುತ್ತದೆ. ತೀವ್ರವಾದ ರೋಗದಲ್ಲಿ ಎರಡು ಕಣ್ಣುಗಳ ಪಾಪೆ (Pupil ತಾರಕೆ)ಗಳಲ್ಲಿ ಆಕಾರದಲ್ಲಿ ಅಂತರ ಕಂಡರೆ ಒಂದು ಕಣ್ಣಿಗೆ ಈ ರೋಗ ಪ್ರಾರಂಭವಾದ ಸೂಚನೆ

ಯಾಗಿದೆ. ಮತ್ತು ಬೆಳಿಗ್ಗೆ ವಸ್ತುವನ್ನು ನೋಡುವಾಗ ಬಣ್ಣದ ವರ್ತುಲ ಕಾಣುವುದು ಮುಖ್ಯ ಲಕ್ಷಣ. ನೋಟದಲ್ಲಿ ವಸ್ತುಗಳು ಎರಡೆರಡಾಗಿ ಕಾಣುವುದು ಇನ್ನೊಂದು ಸೂಚಕವಾಗಿದೆ. ದೀಪದ ಸುತ್ತಲೂ ಏಳು ಬಣ್ಣದ ವರ್ತುಲ ಕಾಣಿಸಬಹುದು.

ತಪ್ಪು ಆಹಾರ ಸೇವನೆ ಇದಕ್ಕೆ ಒಂದು ಮುಖ್ಯ ಕಾರಣ ಎಂದು ತಿಳಿಸಿ ನಿಸರ್ಗೋಪಚಾರ, ದೀರ್ಘಲಂಚನ, ಶವಾಸನ ಹಾಗೂ ಧ್ಯಾನಗಳಿಂದ ಈ ರೋಗವನ್ನು ತಡೆಯಬಹುದೆಂದು ಆಯುರ್ವೇದ ತಜ್ಞ ವೈದ್ಯರು ಅಭಿಪ್ರಾಯಪಡುತ್ತಾರೆ.

ಆದರೆ ಒಳ್ಳೇ ನೇತ್ರರೋಗತಜ್ಞರ ಬಳಿ ಹೋಗಿ ಬೇಗನೆ ಶಸ್ತ್ರಕ್ರಿಯೆ ಮಾಡಿಸಿಕೊಳ್ಳುವುದು ಮೇಲು ಎಂದು ನಮ್ಮ ಅಭಿಪ್ರಾಯವಾಗಿದೆ. ತಡೆ ಮಾಡಿದಂತೆ ಕಣ್ಣುಗಳ ಶಕ್ತಿ ದುರ್ಬಲವಾಗುತ್ತದೆ. ಮತ್ತು ಈ ರೋಗದಲ್ಲಿ ಎಂದೂ ಸ್ವತ:ಚಿಕಿತ್ಸೆ ಮಾಡಿಕೊಳ್ಳಬಾರದು ರೋಗವು ಮತ್ತೊಂದು ಕಣ್ಣಿಗೂ ಹಬ್ಬುವದನ್ನು ಯೋಗ್ಯ ಚಿಕಿತ್ಸೆಯೇ ತಪ್ಪಿಸಬಹದು.

ದೀರ್ಘಕಾಲದ ರೋಗವು ಬೇಗನೆ ರೋಗದ ಸುಳುವನ್ನು ನೀಡದಂತೆ ಕ್ರಮೇಣ ದೃಷ್ಟಿ ಶಕ್ತಿಯನ್ನು ಕುಗ್ಗಿಸುತ್ತ ಬಂದು ಪೂರ್ತಿ ಅಂಧತ್ವವನ್ನು ನೀಡುವ ಘಾತಕ ರೋಗವಾಗಿದೆ.

ಈ ರೋಗಕ್ಕೆ ಕಣ್ಣುಗಳ ಅತ್ಯಾಯಾಸ ಅಸಮತೋಲನ ಆಹಾರ ಕಾರಣವಾಗಬಹುದಾದಂತೆ ಕೊಟಿಲೆಸೋನ್ ಔಷಧಿಯ ದುರುಪಯೋಗ ಸಹ ಕಾರಣವಾದೀತು. ನನ್ನ ಸಂಬಂಧಿಕ ಪೌಢಶಾಲಾ ಮುಖ್ಯ ಅಧ್ಯಾಪಕರು ಪಾದದ ದಪ್ಪ ಚರ್ಮರೋಗದ ಶಮನಕ್ಕಾಗಿ ಕಾರ್ಟಿಸೋನ್ ಮಲಮನ್ನು ದಪ್ಪವಾಗಿ ಹಚ್ಚಿ ಈ ಗಾಜುಗಣ್ಣು ರೋಗ ತಂದುಕೊಂಡರು.

**ದೃಷ್ಟಿ ಮಾಂದ್ಯ :–** ಮೇಲೆ ತಿಳಿಸಿದ ರೋಗಗಳಲ್ಲದೆ. ದೃಷ್ಟಿಮಾಂದ್ಯಕ್ಕೆ ಬೇರೆ ಕಾರಣ ಇರುವ ಸಾಧ್ಯತೆಗಳಿರುತ್ತದೆ. ಮಧು ಮೇಹ ರೋಗಿಗಳಿಗೆ ರಕ್ತಶರ್ಕರೆ ಹೆಚ್ಚಾಗಿ ಅದು ಕಣ್ಣಿಗೆ ಹೋಗುವ ರಕ್ತ ಚಲನೆಯಲ್ಲಿನ ಸತ್ವವನ್ನು ಕಡಿಮೆ ಮಾಡಿ ನರದೌರ್ಬಲ್ಯವನ್ನು ಮಾಡಿ ದೃಷ್ಟಿಮಾಂದ್ಯವನ್ನು ತರಬಹುದು. ವೈಲಿ ರೋಗ ಸದ್ಯಕ್ಕೆ ನಾಮಾವಶೇಷವಾಗಿದೆ. ಈಗಲೂ ಗೋಣಿದಡಾರ, ಕೆಂಪಿ ರೋಗ (Scarlatina) ಮೂತ್ರಪಿಂಡ ರೋಗ ಉಪದಂಶ ರೋಗದ, ಅರಿಶಿನ ಕಾಮಾಲೆ, ಹಾಗೂ ಪ್ರಮೇಹ (ಗೊನೊರಿಯಾ) ರೋಗದ ಸೋಂಕಿನಿಂದ ಅದೇ ಹುಟ್ಟಿದ ಶಿಶುವಿನ ಕಣ್ಣುಗಳಿಗೆ ರಕ್ಷಣೆಯ ಔಷಧ ಹಾಕದಿರುವುದು, ಮೆದುಳಿನ ಕೆಲವು ರೋಗ ಮುಂತಾದವುಗಳು ದೃಷ್ಟಿ ಶಕ್ತಿಹಾಳಾಗಲು ಕಾರಣವಾಗಬಹುದು.



ಅಕ್ಷಿಪಟಲ (ರೆಟಿನಾ) ಕಿತ್ತು ಬರುವದು ಒಂದು ದೊಡ್ಡ ಗಂಡಾಂತರಕಾರಿ ಬೆಳವಣಿಗೆ. ಇದರಲ್ಲಿ ಕೂಡಲೆ ದೃಷ್ಟಿನಾಶ ಸಂಭವಿಸುತ್ತದೆ. ಹಾಸಿಗೆಯಲ್ಲಿ ರೋಗಿಯನ್ನು ಮಲಗಿಸಿ ನೇತ್ರರೋಗ ತಜ್ಞರಿಂದ ಚಿಕಿತ್ಸೆ ಮಾಡಿಸಬೇಕು.

ಮೂತ್ರಪಿಂಡ ಸರಿಯಾಗಿ ಕೆಲಸ ಮಾಡದಿದ್ದರೆ ಶರೀರದಲ್ಲಿನ ಕಲ್ಮಶವು ಹೊರಟು ಹೋಗದೆ ಕಣ್ಕುರುಡು ಸಂಭವಿಸಿದ ಒಂದು ಸಂದರ್ಭದಲ್ಲಿ ಕೈ.ಡಾ : ಎಸ್. ಕೆ. ಭಟ್ಟ ಹಳಕಾರ ಎಂಬ ಆಯುರ್ವೇದ ಪ್ರಸಿದ್ದ ಚಿಕಿತ್ಸಕರು ಪುನರ್ನವ ಬೇರಿನ ಕಷಾಯ ಕೊಟ್ಟು ರೋಗಿಯ ದೃಷ್ಟಿ ಮರಳಿ ಬರುವಂತೆ ಮಾಡಿದರು. ಕಾರಣ ನಿಧಾನ ಬಹು ಮುಖ್ಯವಾದುದು.

ಯಾರೋ ಹೇಳಿದರೆಂದು ಯಾವುಯಾವುದೋ ಔಷಧಿಯನ್ನು ಕಣ್ಣಿಗೆ ಹಾಕಬಾರದು.

**ಕಣ್ಣುಗಳಲ್ಲಿ ದುರ್ಮಾಂಸ ಬೆಳೆಯುವುದು :–** (Pterygium) ಇದರಲ್ಲಿ ಕಣ್ಣಿಂಚಿನಿಂದ ಕೆಂಪು ತರದ ದುರ್ಮಾಂಸವು ಹಬ್ಬುತ್ತ ದೃಷ್ಟಿಕೇಂದ್ರಕ್ಕೂ ಹಬ್ಬಿದಾಗ ಕಣ್ಣು ಕಾಣದಾಗುತ್ತದೆ.

ಇದಕ್ಕೆ ಒಬ್ಬ ಹಳ್ಳಿವೈದ್ಯರು ನುಗ್ಗೆ ಎಲೆ ರಸದಲ್ಲಿ ಕಲ್ಲುಸಕ್ಕರೆಯ ಜಿನುಗು ಪುಡಿಮಾಡಿ ಸೇರಿಸಿ ಕಣ್ಣಿಗಸಿ ಹಾಕಿದರೆ ದುರ್ಮಾಂಸ ಕತ್ತರಿಸುತ್ತಾ ಬಂದು ಕಣ್ಣು ಸ್ವಚ್ಚವಾಗುತ್ತದೆ ಎಂದಿರುವರು. ಇದರಲ್ಲಿ ಅಪಾಯಕಾರಿಯಾದ ತ್ರೀವ್ರ ವಿಷವೇನೂ ಇಲ್ಲ. ಆದರೆ ಈ ಚಿಕಿತ್ಸೆಯನ್ನು ನಾನು ಮಾಡಿ ನೋಡಿಲ್ಲ.

ಶಸ್ತ್ರಕ್ರಿಯೆ ಮಾಡಿ ದುರ್ಮಾಂಸವನ್ನು ತೆಗೆದು ಹಾಕಿದರೂ ಪುನಃ ಅದು ಬೆಳೆಯುತ್ತದೆಯೆಂದು ಒಬ್ಬ ಹೋಮಿಯೋಪಥಿ ಸರ್ಜರಿ ನಿಪುಣ ಚಿಕಿತ್ಸಕರು ತಿಳಿಸಿದ್ದಾರೆ.

ಇದಕ್ಕೆ ಹೋಮಿಯೋಪಥಿ ಚಿಕಿತ್ಸೆ ಉಂಟು. ಅದು ಪರಿಣಾಮ ನೀಡದಿರುವಾಗ ದಿಲ್ಲಿಯ ಹೋಮಿಯೋಪಥಿಕ್ ಹೆರಿಟೇಟ್ ಪತ್ರಿಕೆಯಲ್ಲಿ ಕೊಟ್ಟ ಫ್ಲಾವರಾ ಔಷಧಿ ಚಿಕಿತ್ಸೆ ಗುಣಕಾರಿಯಾದೀತು. ಹೋಮಿಯೊಪಥಿ ಔಷಧಿ ಅಂಗಡಿಯಲ್ಲಿ ಇವು ದೊರೆಯುತ್ತವೆ.

ಕ್ರೇಟ್ ಎಪಲ್ (Crat Apple) ಹತ್ತು ಬಿಂದು ಔಷಧಿಯನ್ನು ತಣಿಸಿದ ನೀರಲ್ಲಿ ಹಾಕಿ ಅದನ್ನು ನಾಲ್ಕು ವಿಭಾಗ ಮಾಡಿ ದಿನಕ್ಕೆ ನಾಲ್ಕು ಸಲ ಸೇವಿಸಬೇಕು. ಕೇಟ್ ಎಪಲ್, ಹೋಲ್ಲಿ (Holly) ಹಾಗೂ ಮಿಮ್ಯುಲಸ್ (Mimulus) ಮೂರೂ ಫಾವರ್ ಒಟ್ಟೊ ಔಷಧಿಗಳ 10 ಬಿಂದುಗಳನ್ನು ಅರ್ಧ ಲೋಟಾ ತಣಿಸಿದ ನೀರಲ್ಲಿ ಹಾಕಿ ರಾತ್ರಿ ಮಲಗಿದಾಗ ಚಮುಚದಿಂದ ತೆಗೆದು ಕಣ್ಣು ತೊಳೆಯುತ್ತಿರಬೇಕು.

ಕಣ್ಣುಗಳ ರಕ್ಷಣೆಯ ಮುಖ್ಯ ಜ್ಞಾನವನ್ನು ಲೇಖನದಲ್ಲಿ ತಿಳಿಸಲಾಗಿದೆ. ಹಲವಾರು ಕಣ್ಣುಗಳ ರೋಗಗಳಿಗೆ ನೇತ್ರ ತಜ್ಞರ ಚಿಕಿತ್ಸೆ ನಡೆಸುವುದು ಒಳ್ಳೆಯದು. ●

# ಗೋಮುಖ ವ್ಯಾಘ್ರ

ಜೆ. ಶಾರದ ರಾಜಶೇಖರ್, 847, 4ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-40.

ಸಮಾಜದಲ್ಲಿ ನಾನಾವಿಧದ ಜನಗಳನ್ನು ಕಾಣುತ್ತೇವೆ. ಅವರ ರೀತಿ ನೀತಿಗಳಲ್ಲೂ ಗುಣಮಟ್ಟದಲ್ಲೂ ವ್ಯತ್ಯಾಸಗಳನ್ನು ಕಾಣುತ್ತೇವೆ. ಹೊರನೋಟಕ್ಕೆ ಅತ್ಯಂತ ಸಜ್ಜನರಂತೆ ಕಾಣುವ ವ್ಯಕ್ತಿಗಳನ್ನು ಒಳಗೆ ಅತ್ಯಂತ ದುಷ್ಟಗುಣಗಳಿಂದ ಕೂಡಿದವರಿಗಾಗಿಯೂ ಇರುತ್ತಾರೆ ಇಂಥಹ ವ್ಯಕ್ತಿಗಳನ್ನೇ ಗೋಮುಖ ವ್ಯಾಘ್ರಗಳೆಂದು ಕರೆಯುವುದು ಅವರ ಬಾಯಿಂದ ಹೊರಡುವುದು ಸಜ್ಜನಿಕೆಯ ನುಡಿ. ಬೆಣ್ಣೆಯಲ್ಲಿ ಕೂದಲು ತೆಗೆದಂತೆ ಅವರ ಮಾತು ನಡೆ ನುಡಿ. ಅಂಥಹ ವ್ಯಕ್ತಿಗಳನ್ನು ಮೊದಲ ನೋಟಕ್ಕೆ ಕಂಡಾಗ ಇಂಥಹ ಸಜ್ಜನಿಕೆಯ ವ್ಯಕ್ತಿ ಅಪರೂಪವೆಂದು ಭಾಸವಾಗುತ್ತದೆ. ಇಂಥಹ ವ್ಯಕ್ತಿಗಳನ್ನು ಕಂಡೆ 'ಅತಿವಿನಯಂ ಧೂರ್ತ ಲಕ್ಷಣಂ' ಎಂಬ ನಾಣ್ಣುಡಿ ಪ್ರಚಲಿತವಾಗಿರಬಹುದು. ಸಮಾಜದಲ್ಲಿ ತಾವು ಗಣ್ಯವ್ಯಕ್ತಿಗಳೆಂದು ಹೆಸರು ತೆಗೆದುಕೊಳ್ಳಬೇಕೆಂಬ ಭಾವನೆಯಿಂದ ಮಾತ್ರ ಪ್ರೇರಿತರಾಗಿ ಹೊರ ನೋಟದಲ್ಲಿ ಒಳ್ಳೆಯವರು. ಆದರೆ ತೆರೆಮರೆಯಲ್ಲಿ ಇಂಥಹ ವ್ಯಕ್ತಿಗಳು ಮಾಡುವುದೆಲ್ಲ ನೀಚ ಕೆಲಸಗಳು. ಇಂತಹ ವ್ಯಕ್ತಿಗಳು ತುಂಬಾ ಸ್ವಾರ್ಥಿಗಳಾಗಿರುವುದು ಉಂಟು. ತಮ್ಮ ಸ್ವಾರ್ಥ ಸಾಧನೆಗಾಗಿ ಮತ್ತೊಬ್ಬ ವ್ಯಕ್ತಿಯನ್ನು ತುಳಿದು ಮೇಲೆ ಬರಲು ಹವಣಿಸುತ್ತಿರುತ್ತಾರೆ. ಆದರೆ ಇಂಥಹ ವ್ಯಕ್ತಿಗಳ ಗುಣ ಕೆಲವು ಕಾಲದವರೆಗೆ ಮಾತ್ರ ನಡೆಯುತ್ತದೆಯೇ ಹೊರತು ಶಾಶ್ವತವಾಗಿ ನಿಲ್ಲುವಂಥಹುದಲ್ಲ ಇವರ ಒಡನಾಟಕ್ಕೆ ಬಂದ ವ್ಯಕ್ತಿಗಳು ಸ್ವಲ್ಪಕಾಲ ನಂಬಬಹುದೆ ಹೊರತು ಒಡನಾಟ ಹೆಚ್ಚಿದಂತೆಲ್ಲಾ ಇವರ ನೈಜ ಗುಣ ಬಯಲಾಗಿ ಇವರಿಂದ ದೂರ ಸರಿಯುತ್ತಾರೆ.

ಗೋಮುಖವ್ಯಾಘ್ರಗಳು ಪುರುಷರಿಗೆ ಸೀಮಿತವಲ್ಲ. ಸ್ತ್ರೀಯರಲ್ಲೂ ಸಹ ಇಂಥಹ ವ್ಯಕ್ತಿಗಳನ್ನು ಕಾಣ ಬಹುದಾಗಿದೆ. ಸಮಾಜದ ಎಲ್ಲ ಸ್ತರದ ಜನಗಳಲ್ಲೂ ಇಂಥಹ ವ್ಯಕ್ತಿಗಳನ್ನು ಕಾಣಬಹುದಾಗಿದೆ. ನಂಬಿಸಿ ತಲೆಕೊಯ್ಯುವ ಅಂಥಹ ಜನರಿಂದ ದೂರ ಇರುವುದು ಒಳಿತು. ವೇಷ ಭೂಷಣಗಳಲ್ಲೂ ಸಹ ಇಂಥಹ ವ್ಯಕ್ತಿಗಳು ಬಹಳ ಎಚ್ಚರವಹಿಸಿ ಸಜ್ಜನರಂತೆ ಗಣ್ಯವ್ಯಕ್ತಿಗಳಂತೆ ಕಾಣಲು ತಮ್ಮನ್ನು ತಾವು ಸಜುಗೊಳಿಸಿಕೊಂಡಿರುತ್ತಾರೆ. ಎಲ್ಲರೂ ತಮ್ಮನ್ನು ಗಣ್ಯವ್ಯಕ್ತಿ ಎಂದು ಹೊಗಳಲಿ ಎಂಬ ಅಭೀಪ್ಸೆಯು ಸಹ ಇವರಲ್ಲಿ ಗಾಢವಾಗಿರುತ್ತದೆ ತಮ್ಮ ಒಳಗಿನ ದುಷ್ಕೃತ್ಯಗಳು ಪರರಿಗೆ ಕಾಣಬಾರದೆಂದು ಬಹಳ ಎಚ್ಚರವಹಿಸಿ ಮಾಡುತ್ತಿರುತ್ತಾರೆ. ಆದರೆ ಕೆಟ್ಟಕೃತ್ಯಗಳು ಎಷ್ಟು ದಿನ ಬೆಳಕಿಗೆ ಬರದೆ ಇರಲು ಸಾಧ್ಯ ಒಂದಲ್ಲ ಒಂದು ದಿನ ಇದು ಬೆಳಕಿಗೆ ಬಂದೆ ಬರುತ್ತದೆ. ಆಗ ಸಮಾಜದಲ್ಲಿ ಗಣ್ಯ ವ್ಯಕ್ತಿ ಎನಿಸಿಕೊಂಡವರನ್ನು ಸಮಾಜ ಕೀಳಾಗಿ ಕಂಡೇ ಕಾಣುತ್ತದೆ ಎಂಬ ಅರಿವು ಇವರಿಗಿರಬೇಕು. ಕೆಟ್ಟಗುಣಗಳನ್ನು ಮುಚ್ಚಲು ಮೇಲೆ ಸೋಗಿನ ಪಾಲಿಶ್ ಎಷ್ಟು ದಿನ ನಿಲ್ಲಬಲ್ಲದು. ಗಿಲೀಟಒಡವೆಗಳಂತೆ ಇವರ ಬಾಳು.



ಚೊಕ್ಕ ಚಿನ್ನ ಚಿನ್ನವೆ ಗಿಲೀಟ್ ಒಡವೆಗಳ ಪಾಲಿಶ್ ಎಷ್ಟು ದಿನ ಇರಬಲ್ಲದು ? 'ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ, ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ ಎಂಬ ಮಾತು ಕಟು ಸತ್ಯ. ಗೋಮುಖ ವ್ಯಾಘ್ರಗಳು ಸಮಾಜದಲ್ಲಿ ತುಂಬಿ ತುಳುಕಿದ್ದಾರೆ. ನೇರವಾದ ದುಷ್ಟರಿಗಿಂತ ಇವರು ತುಂಬಾ ಅಪಾಯಕಾರಿ, ನಯವಂಚಕರು, ವಂಚಿಸಿ ಸಂತಸ ಪಡುವರು. ವಂಚಿಸಿ ಕೊಡುವ ದುಃಖ ಪೀಡಿತನಾಗಿ ಹಿಡಿಶಾಪ ಹಾಕುತ್ತಾನೆ. ಅದರೆ ಇವರುಗಳು ಆದನ್ನು ಯೋಚಿಸುವುದೇ ಇಲ್ಲ.

ವಂಚಿಸಿಕೊಂಡ ವ್ಯಕ್ತಿಯ ಮನಕ್ಕೆ ಬಾಂಬ್ ಹಾಕುವ ಗೋಮುಖವ್ಯಾಘ್ರಗಳು ತುಂಬಾ ಅಪಾಯಕಾರಿಗಳು. ಇಂಥಹ ವ್ಯಕ್ತಿಗಳಿಂದ ಆದಷ್ಟು ದೂರ ಇರುವುದು ಒಳಿತು. ಇವರ ನಯವಿನಯಕ್ಕೆ ಮರುಳಾಗದಿರಿ. ಮರುಳಾದಿರೊ ನೀವು ಜೀವಮಾನ ಪರ್ಯಂತ ಮನದಲ್ಲಿ ನರಳುವುದು ತಪ್ಪುವುದಿಲ್ಲ.

# ಕ್ಷೇತ್ರವಾರ್ತೆ

❀ ಹೆಚ್. ಬಿ. ಗಂಗಾಧರಯ್ಯ

## ಗುರುವಂದನ- 89 ನೇ ಜನ್ಮದಿನೋತ್ಸವ

ತ್ರಿವಿಧ ದಾಸೋಹ ಮೂರ್ತಿಗಳಾದ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು 88 ಸಂವತ್ಸರಗಳನ್ನು ದಾಟಿ 1-4-1996 ಕ್ಕೆ 89 ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದ ಶುಭ ಮಹೂರ್ತದಲ್ಲಿ ಜನ್ಮ ದಿನೋತ್ಸವವನ್ನು ಸಾಂಕೇತಿಕವಾಗಿ ಶ್ರೀ ಮಠದ ಶಿಕ್ಷಕರ ಮತ್ತು ಸಿಬ್ಬಂದಿವರ್ಗ ಶ್ರೀ ಹಳೇ ಮಠದಲ್ಲಿ ಸದ್ದುಗದ್ದಲ ವಿಲ್ಲದೆ ಆಚರಿಸಿ ಭಕ್ತಿ ಸಮರ್ಪಣೆ ಮಾಡಿದರು.

ಜುಲೈ 7, 1996 ಭಾನುವಾರ ರಾಜ್ಯಮಟ್ಟದ ಗುರುವಂದನ ಸಮಾರಂಭ ಏರ್ಪಡಿಸಲಾಗಿತ್ತು. ಭಾರತದ ಸರ್ವೋನ್ನತ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಶ್ರೀ ಇ. ಎಸ್. ವೆಂಕಟರಾಮಯ್ಯ ಜ್ಯೋತಿ ಬೆಳಗಿಸುವುದರೊಂದಿಗೆ ಉದ್ಘಾಟನೆ ನೆರವೇರಿಸಿದರು. ಅವರು ಮಾತನಾಡಿ ಇಲ್ಲಿಯ ಸಭೆ ನಮ್ಮ ಭಾರತದ ಪುರಾತನ ಕಾಲದ ಚಿತ್ರ ಹೋಲುತ್ತದೆ. ತಕ್ಷಶಿಲೆ, ನಳಂದ ವಿಶ್ವ ವಿದ್ಯಾಲಯಗಳು ಸ್ಮರಣೆಗೆ ಬರುತ್ತದೆ. ಲಕ್ಷಾಂತರ ವಿದ್ಯಾರ್ಥಿಗಳು ಅಲ್ಲಿ ಶಿಕ್ಷಣ ಪಡೆಯುತ್ತಿದ್ದರು. ದಕ್ಷಿಣ ಭಾರತದ ಈ ಸಿದ್ಧಗಂಗೆಯಲ್ಲಿ 5 ಸಾವಿರ ವಿದ್ಯಾರ್ಥಿಗಳು ಊಟ, ವಸತಿ, ವಿದ್ಯಾ ಸೌಲಭ್ಯ ಪಡೆದಿದ್ದಾರೆ. ಇಂಥ ಶ್ರೀ ಮಠವನ್ನು ಭಾರತದಲ್ಲಿ ಮತ್ತೆಲ್ಲಿಯೂ ಕಾಣಲಾಗುವುದಿಲ್ಲ. ಪೂಜ್ಯ ಶ್ರೀ ಶ್ರೀ ಗಳು ತಮ್ಮ ಮುಕ್ಕಾಲು ಶತಮಾನದ ಜೀವನವನ್ನು ಸಮಾಜದ ಶ್ರೆಯೋಭಿವೃದ್ಧಿಗಾಗಿ ವಿನಿಯೋಗಿಸಿದ್ದಾರೆ.

ಈಗ ತಾಂತ್ರಿಕ ಸೌಲಭ್ಯಗಳಿಂದಾಗಿ ಯಂತ್ರಗಳು ಕೆಲಸ ಮಾಡುವುದರಿಂದ ಕಾಲ ಮತ್ತು ದೂರದ ಮೇಲೆ ಪ್ರಭುತ್ವ ಸಾಧಿಸಿ ನಾವು ಗೆದ್ದಿದ್ದೇವೆ. ಆದರೆ ಹೆಚ್ಚು ಉಳಿತಾಯದ ಕಾಲವನ್ನು ಹೇಗೆ ಬಳಸುತ್ತಿದ್ದೇವೆ? ಅನ್ಯಾಯಕ್ಕೆ ಕಾಲ ಬೇಕಾದಷ್ಟು ಇದೆ. ಒಳ್ಳೆಯ ಕಾರ್ಯಕ್ಕೆ ವೇಳೆ ಇಲ್ಲ. ವಿವೇಚನೆಯಿಂದ ಕಾಲವನ್ನು ಸದ್ವಿನಿಯೋಗ ಮಾಡಬೇಕು. ಆದರೆ ಯುವ ಜನಾಂಗ ಕಾಲವನ್ನು ಹೇಗೆ ಬಳಸುತ್ತಿದೆ ಯೋಚಿಸಿ? ಈ ಬಗ್ಗೆ ಚಿಂತನೆ ಮಾಡಿ.

ಇಂದು ನಮಗೆ ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಮೋಹ, ಲೋಭ, ಮದ, ಮಾತ್ಸರ್ಯಗಳ ಮೇಲೆ ನಿಯಂತ್ರಣವಿಲ್ಲ. ಇದರಿಂದ ಕೆಟ್ಟ ಪರಿಣಾಮ ಸಮಾಜದ ಮೇಲಾಗುತ್ತಿದೆ. ಇದಕ್ಕೆ ಪರಿಹಾರವಾಗಿ ನಿರ್ದೇಶನ ಮತ್ತು ಮಾರ್ಗದರ್ಶನ ಮಾಡಲು ಗುರುಗಳು ಬೇಕು. ಶ್ರೀ ಶ್ರೀ ಗಳವರ ಶ್ರೇಷ್ಠ ವ್ಯಕ್ತಿತ್ವದ ಪ್ರಭಾವದಿಂದ ಸಮಾಜ ಸುಧಾರಣೆ ಯಾಗುತ್ತಿರುವುದು ಸಂತೋಷ ತಂದಿದೆ. ಸಂಸ್ಕೃತಿ ಬೆಳೆಸಲು



ಸಿದ್ಧಗಂಗೆಯಲ್ಲಿ ವ್ಯಾಪಕ ಅವಕಾಶವಿದೆ. 1917 ರಿಂದಲೇ ಇಲ್ಲಿ ವಿದ್ಯಾರ್ಥಿಗಳಿಗೆ ಸಂಸ್ಕೃತ ಅಭ್ಯಾಸಕ್ಕೆ ಅವಕಾಶ ದೊರೆತಿರುವುದು ಶ್ಲಾಘನೀಯವಾಗಿದೆ.

ಶ್ರೀ ಶ್ರೀ ಗಳವರ ವಜ್ರಮಹೋತ್ಸವ ಸ್ಮಾರಕವಾಗಿ ನಿರ್ಮಾಣವಾಗಿರುವ ಭವ್ಯ ಬೃಹತ್ ಸೌಧಗಳು ಅರಮನೆಯಂತೆ ಕಾಣುತ್ತಿವೆ. ಸರ್ಕಾರದ ಧನ ಸಹಾಯವಿಲ್ಲದೆ ಜನ ಸಾಮಾನ್ಯರ ಕೊಡುಗೆಯಿಂದ ಕಲಾತ್ಮಕವಾಗಿ ಅರಳಿ ನೋಡುಗರನ್ನು ವಿಸ್ಮಯಗೊಳಿಸುತ್ತವೆ. ಈ ಸ್ವಯಂ ಪ್ರೇರಿತ ಕೊಡುಗೆಗೆ ಶ್ರೀ ಗಳವರ ಅಪಾರವಾದ ತ್ಯಾಗವೇ ಕಾರಣ.

5000 ವಿದ್ಯಾರ್ಥಿಗಳು ಶಿಸ್ತಿನಿಂದ ಇಲ್ಲಿ ನೆಲೆಸಿದ್ದಾರೆ. ಎಲ್ಲರ ಯೋಗಕ್ಷೇಮವನ್ನು ಶ್ರೀ ಶ್ರೀ ಗಳು ನೋಡಿಕೊಳ್ಳುತ್ತಿದ್ದಾರೆ. ನಾಡಿನ ಜನತೆ ಎಲ್ಲಾ ಕಾಲಕ್ಕೂ ಉದಾರವಾಗಿ ಸಹಾಯ ಮಾಡಿ. ಹಳ್ಳಿಗಳೆಲ್ಲವೂ ಪಟ್ಟಣಗಳಂತೆ ನಾಗರಿಕತೆ ಬೆಳವಣಿಗೆಯಾಗಲು ಶಿಕ್ಷಣ ಮತ್ತು ಧರ್ಮ ಪ್ರಸಾರ ಮಾಡುತ್ತಿರುವ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಒಂದು ಶತಮಾನಕಾಲ ಬಾಳಿ ಬದುಕಲು ಸರ್ವಶಕ್ತ ಪರಮಾತ್ಮನು ಆಯುರಾರೋಗ್ಯ ಸನ್ಮಂಗಳವನ್ನುಂಟು ಮಾಡಲಿ ಎಂದು ಪ್ರಾರ್ಥಿಸಿದರು.

ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು, ಕಿರಿಯ ಶ್ರೀಗಳು ಗುರುಗಳಿಗೆ ಭಕ್ತಿ ಸಮರ್ಪಿಸಿದರು. ಸಮಾಜದಲ್ಲಿ ಅನೇಕವಾಗಿ ಬೇಡುವವರಿದ್ದಾರೆ. ಆದರೆ ಭಕ್ತಿ ಭಿಕ್ಷೆ ಬೇಡುವವರು ಅತಿ ವಿರಳ. ಇತ್ತೀಚೆಗೆ ಯಾಂತ್ರಿಕ ಭಕ್ತಿ ಮತ್ತು ರಾಷ್ಟ್ರೀ ಭಕ್ತಿ ಕಾಣುತ್ತೇವೆ. ದೇಹ ಬಾಗಿದರೆ ಸಾಲದು ಮನ ಬಾಗ ಬೇಕು. ಅರಿಷಡ್ವರ್ಗಗಳನ್ನು ಸಂಯಮ ಮಾಡಿದರೆ ನಿಜ ಭಕ್ತಿ ಸಲ್ಲುತ್ತದೆ. ಪೂಜ್ಯ ಗುರುಗಳ ನಿರಂತರ ತಪಸ್ಸಿನ ಫಲವಾಗಿ ನಾವೆಲ್ಲರೂ ಈ ಪುಣ್ಯ ಭೂಮಿಯಲ್ಲಿ ಉಳಿದು ಬೆಳೆಯುತ್ತಿದ್ದೇವೆ ಎಂದು ಭಕ್ತಿ ಭಾವದಿಂದ ನುಡಿದರು.

ಅಧ್ಯಕ್ಷ ಪೀಠದಿಂದ ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಶ್ರೀ ಎ. ಜೆ. ಸದಾಶಿವ ಅವರು ಮಾತನಾಡಿ ಗುರು ಹೇಳಿದ ನೀತಿ ತತ್ವಗಳನ್ನು ಆಚರಣೆಗೆ ತರಲು ಶ್ರದ್ಧೆಯಿಂದ ಪ್ರಯತ್ನ ಮಾಡುವುದೇ ಗುರುವಂದನೆಯ ಮಹತ್ವ. ಶ್ರೀಗಳಲ್ಲಿರುವ ಅಖಂಡ ಸ್ಫೂರ್ತಿಯನ್ನು ನಮಸ್ಕರಿಸಿದಾಗ ಶಾಂತ ಮನಸ್ಸಿನಿಂದ ಹೀರಿ ಕೊಳ್ಳಬೇಕು. ಅವರಿಗೆ ನಮಸ್ಕರಿಸಬಹುದು. ಆದರೆ ಅವರನ್ನು ಅಭಿನಂದಿಸುವ ಯೋಗ್ಯತೆ ಎಷ್ಟು ಮುಂದಿಗಿದೆ? ಅವರ ಬದುಕು, ಕಾರ್ಯಕ್ಷೇತ್ರ ಹಿಮಾಲಯವನ್ನು ಹೋಲುತ್ತದೆ. ಜನ ಸಾಗರಕ್ಕೆ ಒಳ್ಳೆಯ ಕೆಲಸಗಳನ್ನು ಮಾಡಿದ್ದಾರೆ. "ಕೊಡುವಾತ ಶಂಗ, ಬೇಡುವಾತ ಸಂಗ" ಎಂಬುದು ಅವರ ವಿಚಾರ ಧಾರೆ.

ಜನ ಜೀವನ ಉತ್ತಮವಾಗಲು ಆರ್ಥಿಕ ಮತ್ತು ಆಧ್ಯಾತ್ಮಿಕ ಏಕೀಭವಿಸಿ ಸಾಮರಸ್ಯವಿರಬೇಕು. ಶ್ರೀ ಶ್ರೀ ಗಳಲ್ಲಿ ಪ್ರೇಮ, ಸೌಜನ್ಯ, ಸಹನೆ ಮತ್ತು ಸಮತಾ ಭಾವನೆ ತುಂಬಿರುವುದರಿಂದ ಇಲ್ಲಿಯ ಎಲ್ಲಾ ಅದ್ಭುತ ಕಾರ್ಯಗಳು ಯಶಸ್ವಿಯಾಗಿ ನಡೆದು ಹೋಗುತ್ತಿವೆ. ಮಾನವೀಯ ಅನುಕಂಪ ಅವರ ಬದುಕಿನ ಅವಿಭಾಜ್ಯ ಅಂಗವಾಗಿದೆ ಜನ ಸೇವೆ ದೇವರ ಸೇವೆ, ಎಲ್ಲರನ್ನೂ ತನ್ನಂತೆ ನೋಡಿ ಸ್ವಾರ್ಥವಿಲ್ಲದೆ ಕರ್ತವ್ಯವನ್ನು ದೈವ ನಿಯಮವೆಂದು ತಿಳಿದು ಶ್ರೀ ಶ್ರೀ ಗಳು ಮಾಡುತ್ತಿರುವುದರಿಂದ ನಾಡಿನ ಜನತೆ ಅವರನ್ನು ಹಿಂಬಾಲಿಸುತ್ತಿದ್ದಾರೆ. ಧರ್ಮ ಎಂದರೆ ಕ್ರಮ. ಎಲ್ಲರ ಒಳತಿಗಾಗಿ ಮಾಡುವುದೇ ಧರ್ಮ. ಧರ್ಮ ಸಾಮಾನ್ಯ ಜನತೆಯ ಬೆನ್ನೆಲಬು ಎಂಬುದು ಶ್ರೀ ಗಳವರ ಅಭಿಮತ. ಬಸವಣ್ಣನವರ ಬದುಕಿಗೂ ಶ್ರೀ ಶ್ರೀ ಗಳವರ ಬದುಕಿಗೂ ಪರಿಪೂರ್ಣವಾದ ಸಾಮರಸ್ಯವನ್ನು ಕಾಣುತ್ತೇವೆ. ಶ್ರೀ ಶ್ರೀ ಗಳವರ ಮಹಾಶಕ್ತಿ ಮಾನವ ಕುಲದ ಎಲ್ಲಾ ದೌರ್ಬಲ್ಯಗಳನ್ನು ನಿವಾರಿಸಲಿ ಎಂದು ಪ್ರಾರ್ಥಿಸಿದರು.

ದಿವ್ಯ ಸಾನಿಧ್ಯ ವಹಿಸಿದ್ದ ಬೆಂಗಳೂರು ಜಿಲ್ಲೆ, ಕನಕಪುರ ತಾ||, ಮರಳೇಗವಿ ಮಠದ ಶ್ರೀ ಶ್ರೀ ಕಾಲಾಗ್ನಿ ರುದ್ರಮುನಿಸ್ವಾಮಿಗಳು ಭಾವಪರವಶರಾಗಿ ನಮ್ಮ ಬಡ ಮಠ ಶ್ರೀ ಗಳ ಆಶೀರ್ವಾದದಿಂದ ಚೆನ್ನಾಗಿ ಬೆಳವಣಿಗೆ ಯಾಗುತ್ತಿದೆ. ಸರ್ವರೂ ಮತ್ತು ಎಲ್ಲಾ ಮಠಗಳೂ ಪ್ರಗತಿಯಾಗ ಬೇಕೆಂಬುದು ಪೂಜ್ಯ ಶ್ರೀ ಶ್ರೀ ಗಳ ಅಪೇಕ್ಷೆ. ಇಲ್ಲಿ ಸಹಸ್ರ ಸಹಸ್ರ ವಿದ್ಯಾರ್ಥಿಗಳು ಆಶ್ರಯ ಪಡೆದಿದ್ದಾರೆ. ಇದು ಅವರ ತಪಸ್ಸಿನ ಫಲ. ಶಿವರೂಪಧರಿಸಿ ಶ್ರೀ ಶ್ರೀ ಗಳವರೇ ಈ ಧರೆಗೆ ಬಂದಿದ್ದಾರೆ. ಒಂದು ಶತಮಾನ ಮೀರಿ ಬಾಳಿ ಬದುಕಿ ನಾಡಿಗೆ ಅನುಗ್ರಹಿಸಿ ಆಶೀರ್ವದಿಸಲಿ ಎಂದು ಆಶಿಸಿದರು.

**ಶ್ರೀ ಶ್ರೀಗಳವರ ಸಂದೇಶ :**

ಈ ಮಠ ಸಣ್ಣ ಪ್ರಮಾಣದಲ್ಲಿ ಬೆಳೆದು ಬಂತು. ಹೇಗೆ ಬೆಳೆಯಿತೊ ಅರ್ಥವಾಗುತ್ತಿಲ್ಲ. ನಮ್ಮ ಗುರು ಶ್ರೀ ಶ್ರೀ ಉದ್ದಾನ ಶಿವಯೋಗಿಗಳವರ ಆಶೀರ್ವಾದ ಮತ್ತು ನಾಡಿನ ಜನತೆಯ ನೆರವು ಸಹಕಾರದಿಂದ ಪ್ರಗತಿಯಾಗಿದೆ ಎಂದು ಸ್ಮರಿಸಿದರು.

ಈ ಜಗತ್ತು ಅಖಂಡವಾದ ಬೆಳಕು-ಶಕ್ತಿಯನ್ನು ಆವರಿಸಿದೆ. ದಯಾಮಯನಾದ ಪರಮಾತ್ಮನಲ್ಲಿ ಅಚಲವಾದ ನಂಬಿಕೆ ಶ್ರದ್ಧೆ ಇರಬೇಕು. ಅಪೂರ್ವವಾದ ಶ್ರೇಷ್ಠ ಶಕ್ತಿ ಮಾನವನಿಗೆ ಲಭ್ಯವಾಗಿದೆ. ಸಾರ್ಥಕವಾದ ಪ್ರಯತ್ನ ಮಾಡಬೇಕು. ಎಲ್ಲರೂ ಉತ್ತಮವಾಗಿ ಬಾಳಿ ಬದುಕಬೇಕೆಂಬ ಆಕಾಂಕ್ಷೆ ಇರಬೇಕು. ಹಲವಾರು ಸಮಸ್ಯೆಗಳು ರಾಷ್ಟ್ರವನ್ನು ಆವರಿಸಿವೆ. ದೇಹ ಮಿಥ್ಯ. ಆತ್ಮ ನಿತ್ಯ ಸತ್ಯವಾದುದು. ಆದರೆ ದೇಹವೇ ಸೌಖ್ಯ ಸತ್ಯ ಎಂಬ ಭಾವನೆ ಬೆಳೆಯುತ್ತಿದೆ. ಇದರಿಂದ ಹಣ, ಅಧಿಕಾರ, ಆಸ್ತಿಗೆ ಗುಲಾಮರಾಗುತ್ತಿದ್ದೇವೆ.



ಮಾನವನಿಗೆ ಅನೇಕ ಋಣಗಳಿವೆ. ಪರಿಹಾರವಾಗಬೇಕು. ಪರಹಿತ ಮುಖ್ಯ. ದುಡಿದು-ಹಂಚಿ ಊಟಮಾಡಬೇಕು. ಲೌಕಿಕ-ಆಧ್ಯಾತ್ಮಿಕ ಜೀವನ ಸಮತೋಲನವಾಗಬೇಕು. ಈ ಬೆಳವಣಿಗೆಗಾಗಿ ಮಠಗಳು ಅಸ್ತಿತ್ವಕ್ಕೆ ಬಂದಿವೆ. ಹೇಳುವವರು ಆಚರಿಸಿ ತೋರಬೇಕು. ರಾಜಕೀಯ ಧರ್ಮದ ಒಂದು ಅಂಗ. ಹಿಂದೆ ಧರ್ಮಗುರುಗಳು ರಾಜ ಮಹಾರಾಜರಿಗೆ ಬೋಧನೆ ಮಾಡಿ ಸನ್ಮಾರ್ಗಕ್ಕೆ ತರುತ್ತಿದ್ದರು. ಇಂದು ನಾಯಕರು ಮಾನವೀಯ ಮೌಲ್ಯಗಳನ್ನು ಗೌರವಿಸುತ್ತಿಲ್ಲ. ಭೌತಿಕ ಸಂಪತ್ತಿಗಾಗಿ ಹೆಚ್ಚು ಒತ್ತು ನೀಡಲಾಗುತ್ತಿದೆ. ಇದು ಒಳ್ಳೆಯದಲ್ಲ. ಅತಿ ಸಂಗ್ರಹ ತ್ಯಾಜ್ಯವಾಗಬೇಕು. ಲೌಕಿಕ ಜೀವನದ ಸ್ವಚ್ಛಂದ ಪ್ರವೃತ್ತಿ ತೊಲಗಿ ಜನರು ನೀತಿವಂತರಾಗಬೇಕು. ಇದಕ್ಕೆಪದವಿ ವಿದ್ಯೆಗಿಂತ ಸಾಕ್ಷರತೆಗೆ ಹೆಚ್ಚು ಮಹತ್ವ ನೀಡಲಾಗಿ ವಿದ್ಯಾರ್ಥಿಗಳ ಸಂಖ್ಯೆ ಏರಿದೆ. ಈ ಕಾರ್ಯದಲ್ಲಿ ನೆರವಾಗುತ್ತಿರುವ ಎಲ್ಲರಿಗೂ ಶ್ರೀಮಠ ಋಣಿಯಾಗಿ ಆಭಾರಿಯಾಗಿದೆ ಎಂದು ನುಡಿದರು.

**ಮುಖ್ಯ ಅತಿಥಿಗಳಾಗಿ :**

ತುಮಕೂರು ಲೋಕ ಸಭಾ ಸದಸ್ಯರಾದ ಶ್ರೀ ಸಿ. ಎನ್. ಭಾಸ್ಕರಪ್ಪ ಮಾತನಾಡಿ ಪ್ರಪಂಚದ ಗಮನವನ್ನು ಶ್ರೀ ಶ್ರೀಗಳು ಸೆಳೆದಿದ್ದಾರೆ. ಅದರಲ್ಲೂ ತುಮಕೂರಿನ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಕಾರಣ ಕರ್ತರಾಗಿದ್ದಾರೆ. ಅವರ ಅಮೃತ ಹಸ್ತದಿಂದ ಪ್ರಾರಂಭವಾದ ಎಲ್ಲಾ ಕೈಗಾರಿಕೆಗಳೂ ಪ್ರಗತಿಯಾಗಿವೆ. ಲೋಕ ಸಭಾ ಸದಸ್ಯರಿಗೆ ನೀಡುವ ಖೋಟಾದಲ್ಲಿ ಪ್ರತಿ ವರ್ಷ 10 ಲಕ್ಷರೂಗಳನ್ನು ಶ್ರೀ ಮಠದ ಸಾಮಾಜಿಕ ಮಹಾ ಕಾರ್ಯಗಳಿಗೆ ಬಿಡುಗಡೆ ಮಾಡುವುದಾಗಿ ಈ ಸಂದರ್ಭದಲ್ಲಿ ಘೋಷಿಸಿದರು.

ತುಮಕೂರಿನ ಶಾಸಕರಾದ ಶ್ರೀ ಎಸ್. ಶಿವಣ್ಣನವರು ಸರ್ಕಾರದ ಮಾಡಲಾಗದ ಕೆಲಸಗಳನ್ನು ಶಾಂತಿಯಿಂದ ಶ್ರೀ ಶ್ರೀಗಳು ಮಾಡುತ್ತಿದ್ದಾರೆ ಎಂದು ಭಾವುಕತೆಯಿಂದ ಹೇಳಿದರು. ಸಮಾಜ ರಾಷ್ಟ್ರ ಉದ್ಧಾರವಾಗಲು ಶ್ರೀಗಳ ಮಾರ್ಗದರ್ಶನ ಎಲ್ಲಾ ಕಾಲಕ್ಕೂ ಪ್ರಸ್ತುತ ಎಂದರು.

ವಿಧಾನ ಪರಿಷತ್ ಸದಸ್ಯರಾದ ಶ್ರೀ ಮಲ್ಲಣ್ಣ ತುಮಕೂರು ಜಿಲ್ಲೆಗೆ ಶ್ರೀಗಳು ವರಪ್ರಸಾದವಾಗಿದ್ದಾರೆ. ಉನ್ನತಮಟ್ಟದ ಮಹಾ ವ್ಯಕ್ತಿತ್ವ ಉಳ್ಳವರು. ಸೂರ್ಯನನ್ನು ಪರಿಚಯಿಸಿದಂತಾಗುತ್ತದೆ. ಇಲ್ಲಿ ಓದಿದ ಲಕ್ಷಾಂತರ ವಿದ್ಯಾರ್ಥಿಗಳು ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಮುಂದುವರೆದಿದ್ದಾರೆ. ಎಲ್ಲಾ ಕ್ಷೇತ್ರಗಳಲ್ಲಿ ನೈತಿಕ ಅಧಃ ಪತನವಾಗಿದೆ. ಸ್ವಾಮಿಗಳ ಹಿತ ನುಡಿಯಿಂದ ಸಮಾಜ ಶುದ್ಧೀಕರಣವಾಗಬೇಕು ಎಂದು ಆಶಿಸಿದರು.

ಕೊರಟಗೆರೆ ಶಾಸಕರಾದ ಶ್ರೀ ಚೆನ್ನಿಗಪ್ಪನವರು ಮಾತನಾಡಿ ಶ್ರೀಮಠದ ಮಹಾ ಕಾರ್ಯಗಳು ಲೋಕ ವಿಖ್ಯಾತವಾಗಿವೆ. ಜನತೆ ತನು, ಮನ, ಧನಗಳನ್ನು ಸದ್ಭಾವನೆಯಿಂದ ಇಲ್ಲಿಗೆ ಅರ್ಪಿಸುತ್ತಿದ್ದಾರೆ. ಶ್ರೀ ಶ್ರೀಗಳ ವಜ್ರ ಮಹೋತ್ಸವ ಸ್ಮಾರಕಗಳು ಮತ್ತು ರಚನಾತ್ಮಕ ಸತ್ಕಾರ್ಯಗಳಿಗಾಗಿ 1 ಲಕ್ಷ ರೂಗಳನ್ನು ನೀಡುವುದಾಗಿ ಸಂತೋಷದಿಂದ ವಾಗ್ದಾನ ಮಾಡಿದ್ದಲ್ಲದೆ ತಮ್ಮ ಆದಾಯದಲ್ಲಿ ಪ್ರತಿವರ್ಷ ಶೇಕಡ 20ರಷ್ಟನ್ನು ಶ್ರೀ ಮಠಕ್ಕೆ ಸಲ್ಲಿಸುವುದಾಗಿ ಮನಃ ಪೂರ್ವವಾಗಿ ಘೋಷಿಸಿದರು.

**ಸನ್ಮಾನಿತರ ನುಡಿ:**

**ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲ ಪತಿಗಳಾದ ಶ್ರೀ ಎಸ್. ಆರ್ ಶೆಟ್ಟಿ**

ಶ್ರೀ ಶ್ರೀಗಳು ಯಾವಾಗಲೂ ಕೃತಜ್ಞತೆಯ ನುಡಿ ಮುತ್ತುಗಳನ್ನು ಆಡುತ್ತಾರೆ. ಇಳಿವಯಸ್ಸಿನಲ್ಲೂ ತಮ್ಮ ನುಡಿಯಿಂದ ಎಚ್ಚರಿಸುತ್ತಿದ್ದಾರೆ. ಕರ್ಮಯೋಗಿಗಳು. ತುಮಕೂರಿನಲ್ಲಿ ಸ್ನಾತಕೋತ್ತರ ಕೇಂದ್ರ ಪ್ರಾರಂಭಿಸಲು ನೆರವಾದರು. ವಿದ್ಯಾ ಪ್ರಸಾರದಲ್ಲಿ ಅವರ ಸೇವೆ ಅಮೂಲ್ಯ. ಬಡವರ ಉದ್ಧಾರಕ್ಕಾಗಿ ಅವರು ಶತಾಯುಷಿಗಳಾಗಲಿ ಎಂದು ದೇವರನ್ನು ಪ್ರಾರ್ಥಿಸಿದರು.

**ಕನ್ನಡ ಶಕ್ತಿ ಕೇಂದ್ರದ ಅಧ್ಯಕ್ಷರಾದ ಡಾ. ಎಂ. ಚಿದಾನಂದಮೂರ್ತಿ**

8ವರ್ಷಗಳ ಹಿಂದೆ ಸಿದ್ಧಗಂಗೆ ನೆಲ ಮುಟ್ಟಿ ನಮಸ್ಕರಿಸಿ ಶ್ರೀ ಶ್ರೀಗಳ ಆಶೀರ್ವಾದಕ್ಕೆ ಬಂದೆ. ಇಲ್ಲಿಂದ ಹಂಪಿಗೆ ನಡೆದು ಹೋದೆ. "ಸಿದ್ಧಗಂಗೆ" ಕರ್ನಾಟಕದ ಪ್ರತೀಕವಾದ ಸಂಸ್ಥೆ. ಕನ್ನಡಿಗರು ಎಲ್ಲಾ ಕಾಲಕ್ಕೂ ಸಂಸ್ಕೃತಿಯ ಕೇಂದ್ರವಾದ ಸಿದ್ಧಗಂಗೆಯನ್ನು ಶ್ರದ್ಧಾ ಭಕ್ತಿಯಿಂದ ಸ್ಮರಿಸಬೇಕೆಂದರು.

**ಮಾಜಿ ಮಂತ್ರಿ ಎಸ್. ರೇವಣ್ಣ**

ವಿದ್ಯಾ ಪ್ರಸಾರಕ್ಕೆ ಜಾತ್ಯಾತೀತ ರಾಷ್ಟ್ರಕ್ಕೆ ಮೊದಲು ಬುನಾದಿ ಹಾಕಿದ ಮಠವೆಂದರೆ ಸಿದ್ಧಗಂಗೆ. ಶ್ರೀಗಳಿಗೆ ಪಟ್ಟವಾದಾಗ ಯಾವ ಸಂಪನ್ಮೂಲವಿಲ್ಲದ ಬಡ ಮಠವಾಗಿತ್ತು. ಈ ಹಂತಕ್ಕೆ ಬೆಳವಣಿಗೆ ಮಾಡಲು ಬಹಳ ಪ್ರಯಾಸ ಪಟ್ಟಿದ್ದಾರೆ. ಅವನ್ನು ವರ್ಣಿಸಲು ಅಸದಳ. ಅವರ ಹೆಸರು ಮತ್ತು ಕೀರ್ತಿ ಆಚಂದ್ರಾರ್ಕವಾಗಿರುತ್ತದೆಂದು ಬಣ್ಣಿಸಿದರು.

**ಬೂದಿಗೆರೆಯ ಗ್ರಾ. ಪಂ. ಅಧ್ಯಕ್ಷರಾದ ಶ್ರೀ ಎಂ. ಲಕ್ಷ್ಮೀನಾರಾಯಣ**

ಶ್ರೀ ಶ್ರೀಗಳವರಿಂದ ಸ್ಫೂರ್ತಿಪಡೆದ ನಾನು, ಬೂದಿಗೆರೆಯನ್ನು ಇಂದು ಚಿಕ್ಕ ಸಿದ್ಧಗಂಗಾ ಕ್ಷೇತ್ರವಾಗಿ ಅರಳಿಸಲು ಕಾರಣವಾಯಿತು ಎಂದು ನಮ್ರತೆಯಿಂದ ಹೇಳಿದರು.



ಸಮಾರಂಭದ ವೇದಿಕೆಗೆ ಬರುವ ಮುನ್ನ ಪೂಜ್ಯ ಶ್ರೀ ಶ್ರೀಗಳು ಮತ್ತು ಗಣ್ಯರನ್ನು ರಾಜ್ಯ ಪ್ರಶಸ್ತಿ ವಿಜೇತ ಶ್ರೀ ಹೆಚ್. ಎಸ್. ನೀಲಕಂಠಯ್ಯ ವೀರಗಾಸೆ ತಂಡದವರು ವಾದ್ಯ ಮೇಳಗಳೊಂದಿಗೆ 82 ಪೂರ್ಣ ಕುಂಭಗಳು ಹಾಗೂ ಪಂಚ ಕಳಸಗಳನ್ನು ಹಿಡಿದ ತುಮಕೂರು ಸಿದ್ಧಗಂಗಾ ಮಹಿಳಾ ಕಾಲೇಜಿನ ವಿದ್ಯಾರ್ಥಿನಿಯರು ಹಳೇಮಠದಿಂದ ಸ್ವಾಗತ ಕೋರಿ ಮೆರವಣಿಗೆಯಲ್ಲಿ ಕರೆತಂದರು 5000 ಮಂದಿ ಶ್ರೀಮಠದ ವಿದ್ಯಾರ್ಥಿಗಳು ಸಾಲಾಗಿ ನಿಂತು ಶ್ರೀ ಶ್ರೀಗಳವರಿಗೆ ನಮನಗಳನ್ನು ಭಕ್ತಿಯಿಂದ ಸಮರ್ಪಿಸಿದರು.

ಸಮಾರಂಭದ ಮುಕ್ತಾಯ ಹಂತದಲ್ಲಿ ರಾಜ್ಯದ ನಾನಾ ಭಾಗಗಳಿಂದ ಬಂದ ಸುಮಾರು 25,000ಕ್ಕೂ ಮೇಲ್ಪಟ್ಟ ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ತಮ್ಮ ಭಕ್ತಿ ಪ್ರತೀಕವಾಗಿ ಅಸಂಖ್ಯಾತವಾಗಿ ಪುಷ್ಪಹಾರಗಳನ್ನು ಪೂಜ್ಯರಿಗೆ ಅರ್ಪಿಸುವ ದೃಶ್ಯ ಸಭೆಯನ್ನು ಮೂಕ ವಿಸ್ಮಿತರನ್ನಾಗಿ ಮಾಡಿತು. ಸುರಿಮಳೆಯಂತೆ ಪುಷ್ಪಹಾರಗಳು ಶ್ರೀ ಶ್ರೀಗಳ ಕಂಠವನ್ನು ಸುತ್ತುವರಿಯುತ್ತಿದ್ದವು. ವೇದಿಕೆಯಲ್ಲಾ ಪುಷ್ಪಹಾರಗಳ ಹೊರೆಯಿಂದ ತುಂಬಿ ಹೋಗಿತ್ತು.

ಶ್ರೀ ಬಿ. ಎಸ್. ಮಲ್ಲಿಕಾರ್ಜುನಯ್ಯ ತಂಡದವರಿಂದ ಆಗಿಂದಾಗ್ಗೆ ವಚನ ಗಾಯನ ನಡೆಯಿತು. ಈ ಸಂಗೀತ ಸುಧೆಯಲ್ಲಿ ಸಭೆಯುಳುಗಿ ಮೌನ ಧ್ಯಾನಾಸಕ್ತವಾಗಿತ್ತು.

ಪ್ರಾರಂಭಕ್ಕೆ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆಯಾಯಿತು. ಶ್ರೀಮಠದ ವಿದ್ಯಾ ಸಂಸ್ಥೆಯ ಜಂಟಿಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪ ಸ್ವಾಗತ ಕೋರಿದರು. ಹೆಚ್. ವಿ. ವೀರಭದ್ರಯ್ಯ ಕಾರ್ಯಕ್ರಮ ನಿರೂಪಿಸಿದರು. ಹೆಚ್. ಬಿ. ಗಂಗಾಧರಯ್ಯ ವಂದನೆ ಸಲ್ಲಿಸಿದರು.

ಸಂಜೆ 5 ಘಂಟೆಗೆ "ಶಿವಾನುಭವ ಗೋಷ್ಠಿ" ನಡೆಯಿತು. ಕನ್ನಡ ಶಕ್ತಿ ಕೇಂದ್ರದ ಅಧ್ಯಕ್ಷರಾದ ಡಾ. ಎಂ. ಚಿದಾನಂದಮೂರ್ತಿ ಮತ್ತು ತುಮಕೂರು ವಿದ್ಯಾವಾಹಿನಿ ಕಾಲೇಜಿನ ಉಪನ್ಯಾಸಕರಾದ ಸೋಮು ಭಾಸ್ಕರ್ ಉಪನ್ಯಾಸ ನೀಡಿದರು. ಶ್ರೀ ಶ್ರೀಗಳು ಆಶೀರ್ವಚನ ವಿತ್ತರು.



## ಕಡಿಮೆ ಹಣ ಖರ್ಚುಮಾಡಿ

## ಹೆಚ್ಚು ಬಟ್ಟೆಗಳನ್ನು ಒಗೆಯಿರಿ.

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ

'ಕಸ್ತೂರಿ' 'ಕಸ್ತೂರಿ'

ನೀಲಂ ಬಾರ್ ಸೋಪ್ ನೀಲಂ ಬಾರ್ ಸೋಪ್

**ರಾಮಕೃಷ್ಣ ಆಯಿಲ್ ಮಿಲ್, ತುಮಕೂರು**

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ, ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.

ಹೋಟೆಲ್
ಶ್ರೀ ನಂಜುಂಡೇಶ್ವರ
ಊಟ, ವಸತಿ ಮತ್ತು ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ
8597, 2373, 2577






ಶ್ರೀ ನಂಜುಂಡೇಶ್ವರ
ಬೇಕರಿ
ತುಮಕೂರು ಜಿಲ್ಲೆಯ ಪ್ರಖ್ಯಾತ ಬೇಕರಿ
ಚಿಕ್ಕಪೇಟೆ ತುಮಕೂರು-1
ದೂರವಾಣಿ : 8077



ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : 2677

ಸಿ.ವಿ. ಮಹದೇವಯ್ಯ

ಶ್ರೀ ನಂಜುಂಡೇಶ್ವರ ಸ್ವೀಟ್ಸ್
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ ಬೇಕರಿ ತಿನಿಸುಗಳ ಸ್ವಾದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು-1
ದೂರವಾಣಿ : 2077

" SIDDAGANGA MONTHLY Reg. No. KRNQ - 9

## ಶ್ರೀ ಸಿದ್ಧಗಂಗಾ ಬಸವತತ್ವ ಪ್ರಯೋಗ ಶಾಲೆ
## ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸ್ಮಾರಕ ಸೌಧಗಳು



ನೂತನ ಮಹಾದಾಸೋಹ ಪ್ರಸಾದ ನಿಲಯ



ನೂತನ ಬೃಹತ್ ವಸತಿ ಮಂದಿರ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ - 572 104.